

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಎಂ.ಫಿಲ್.ಪದವಿಯ ನಿಬಂಧ

# 'ಗಾಂಧಿ ಬಂದ' ಕಾದಂಬರಿಯ ಒಂದು ಸಾಂಸ್ಕೃತಿಕ ಅಧ್ಯಯನ

ಸಂಶೋಧನ ವಿದ್ಯಾರ್ಥಿನಿ
ವೀಣಾ ಕುಮಾರ್

ಮಾರ್ಗದರ್ಶಕರು
ಡಾ. ವಿಜಯಾ ಸುಬ್ಬರಾಜ್



ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ
ಬೆಂಗಳೂರು
೨೦೦೮



ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಎಂ.ಫಿಲ್.ಪದವಿಯ ನಿಬಂಧ

# 'ಗಾಂಧಿ ಬಂದ' ಕಾದಂಬರಿಯ ಒಂದು ಸಾಂಸ್ಕೃತಿಕ ಅಧ್ಯಯನ

ಸಂಶೋಧನ ವಿದ್ಯಾರ್ಥಿನಿ
ವೀಣಾ ಕುಮಾರ್




ಮಾರ್ಗದರ್ಶಕರು
ಡಾ. ವಿಜಯಾ ಸುಬ್ಬರಾಜ್



ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ
ಬೆಂಗಳೂರು
೨೦೦೯

# ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ. ಶ್ರೀ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೮-೨೦೦೯ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಗಾಂಧಿ ಬಂದ"** ಕಾದಂಬರಿಯ ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ನಿಬಂಧವನ್ನು ಡಾ. ವಿಜಯಾ ಸುಬ್ಬರಾಜ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ನಿಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಧೃಡೀಕರಿಸುತ್ತೇನೆ.

ಸಹಿ/

ವೀಣಾ ಕುಮಾರ್

**[ವೀಣಾ ಕುಮಾರ್]**

ಸಂಶೋಧನಾ ವಿದ್ಯಾರ್ಥಿನಿ

ದಿನಾಂಕ : ೩೦-೦೬-೨೦೦೯

ಸ್ಥಳ: ಬೆಂಗಳೂರು

## ಮಾರ್ಗದರ್ಶಕರ ಪ್ರಮಾಣಪತ್ರ

ಬಿ.ಎಂ. ಶ್ರೀ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೮-೨೦೦೯ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಗಾಂಧಿ ಬಂದ"** ಕಾದಂಬರಿಯ ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ನಿಬಂಧವನ್ನು ವೀಣಾ ಕುಮಾರ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ. ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಧೃಡೀಕರಿಸುತ್ತೇನೆ.

ಸಹಿ

ವಿಜಯಾ ಸುಬ್ಬರಾಜ್

[ಡಾ. ವಿಜಯಾ ಸುಬ್ಬರಾಜ್]

ಮಾರ್ಗದರ್ಶಕರು

ದಿನಾಂಕ : ೨೦-೦೬-೨೦೦೯

ಸ್ಥಳ: ಬೆಂಗಳೂರು.

# ಅಧ್ಯಾಯ - ೧

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

ಒಂದು ಸಾವಿರಕ್ಕಿಂತಲೂ ಹೆಚ್ಚು ಸುದೀರ್ಘ ಇತಿಹಾಸವುಳ್ಳ ಕನ್ನಡ ಸಾಹಿತ್ಯ ಪರಂಪರೆಯನ್ನು ಅವಲೋಕಿಸಿದಾಗ ಅದು ಕಾಲದಿಂದ ಕಾಲಕ್ಕೆ ಬದಲಾಗುತ್ತ ಹೊಸತನವನ್ನು ಮೈಗೂಡಿಸಿಕೊಳ್ಳುತ್ತ ಬಂದಿರುವುದನ್ನು ಕಾಣುತ್ತೇವೆ. ಈ ಬದಲಾವಣೆ ಮತ್ತು ಬೆಳವಣಿಗೆ ವಸ್ತುವಿನ ಆಯ್ಕೆ, ಅಭಿವ್ಯಕ್ತಿ ಪ್ರಕ್ರಿಯೇ, ಆಶಯ, ಧೋರಣೆ, ಮೌಲ್ಯ ಶೋಧ, ಭಾಷಾಪ್ರಯೋಗ, ಮುಂತಾದ ನೆಲೆಗಳಲ್ಲಿ ಆಗಿರುವುದು ಮುಖ್ಯ ಸಂಗತಿಯಾಗಿದೆ. ಒಂದು ಕಾಲಘಟ್ಟದಲ್ಲಿ ರಚಿತವಾದ ಸಾಹಿತ್ಯ ತನ್ನ ಭಿನ್ನ ಉದ್ದೇಶ, ಮನೋಧರ್ಮ, ಅಭಿವ್ಯಕ್ತಿಯಿಂದಾಗಿ ಹೊಸದೊಂದು ಪಂಥವಾಗಿಯೇ ಪ್ರಾರಂಭಗೊಳ್ಳುತ್ತದೆ. ತನ್ನ ಹಿಂದಿನ ಸಾಹಿತ್ಯ ಚಳುವಳಿಗೆ ಪ್ರತಿಕ್ರಿಯೆಯ ರೂಪದಲ್ಲಿ ಜನ್ಮತಳೆದ ಈ ಹೊಸಪಂಥ ಕಾಲಾನಂತರದಲ್ಲಿ ಇನ್ನೊಂದು ಹೊಸ ಸಾಹಿತ್ಯ ಪಂಥ ಇಲ್ಲವೆ ಚಳವಳಿಗೆ ಪ್ರೇರಕವಾಗಿ ನಿಂತುಕೊಳ್ಳುತ್ತದೆ. ಈ ರೀತಿ ಸಾಹಿತ್ಯದ ಒಂದು ಹೊಸ ಚಳುವಳಿ ಇಲ್ಲವೆ ಸಂಪ್ರದಾಯ ನಿಧಾನವಾಗಿ ತನ್ನ ಸೃಜನಶೀಲ ಸತ್ವವನ್ನು ಕಳೆದುಕೊಳ್ಳುತ್ತ ಹೊಸ ಪಂಥದ ಸೃಷ್ಟಿಗೆ ಪುಷ್ಟಿ ನೀಡುತ್ತದೆ. ಹೀಗೆ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಪ್ರಾಚೀನ, ಮಧ್ಯಕಾಲೀನ, ಆಧುನಿಕ ಮುಂತಾದ ಬೇರೆ, ಬೇರೆ ಕಾಲಘಟ್ಟಗಳಲ್ಲಿ ವಿಭಿನ್ನ ಸಾಹಿತ್ಯ ಪಂಥ, ಸಂಪ್ರದಾಯಗಳು ಹುಟ್ಟಿಕೊಂಡಿರುವುದು ಸಾಹಿತ್ಯದ ಬದಲಾವಣೆ ಮತ್ತು ಬೆಳವಣಿಗೆಯ ನಿಟ್ಟಿನಲ್ಲಿ ಮಹತ್ವದ ಸಂಗತಿಯಾಗಿದೆ.

ಅಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ - ಬಂಡಾಯವೆಂಬ ವಿಭಿನ್ನ ನೆಲೆಯಲ್ಲಿ ಸಾಹಿತ್ಯ ಪಂಥಗಳು ಕಾಣಿಸಿಕೊಂಡಿವೆ. ಕಾವ್ಯ, ನಾಟಕ, ಸಣ್ಣಕಥೆ, ಕಾದಂಬರಿ, ಪ್ರಬಂಧ, ವಿಚಾರ, ವಿಮರ್ಶೆ, ಸಂಶೋಧನೆ - ಮುಂತಾದ ಪ್ರಕಾರಗಳ ಮೂಲಕ ಆಧುನಿಕ ಕನ್ನಡ ಸಾಹಿತ್ಯ ಶ್ರೀಮಂತಗೊಂಡಿದೆ.

ಕಾದಂಬರಿ ಇತ್ತೀಚಿನ ಸಾಹಿತ್ಯ ಪ್ರಕಾರವಾದರೂ ಹೊಸ ಹೊಸ ಆಯಾಮಗಳನ್ನು ಮೈಗೂಡಿಸಿಕೊಂಡು ಬೆಳೆಯುತ್ತಾ ಬಂದಿದೆ.[೧] ನವೋದಯ, ನವ್ಯ, ದಲಿತ - ಬಂಡಾಯ ಮೊದಲಾದ ಪಂಥಗಳ ನಡುವೆ ಗೆರೆ ಕೊರೆದಂತೆ ಪ್ರತ್ಯೇಕಿಕರಣ ಕನ್ನಡ ಸಾಹಿತ್ಯದಲ್ಲಿ ಕಷ್ಟವೇ. ಈ ವಿವಿಧ ಪಂಥಗಳು ತನ್ನ ಪದರವನ್ನು ಹರಡಿರುವ ದೃಶ್ಯ ತುಂಬ ಮುಖ್ಯವಾಗಿ ತೋರುವುದು ತೊಂಬತ್ತರ ದಶಕದಲ್ಲೇ. . .

ಅಭಿವ್ಯಕ್ತಿಯ ವಿಧಾನದಲ್ಲಿ ಹೊಸ ಬಗೆಗಳನ್ನು ಹುಡುಕುವ ಯತ್ನದಲ್ಲಿ ಉಂಟಾದ ಈ ಗೊಂದಲ ಒಂದು ಕಡೆಗಿದೆ.

ದಲಿತ ಬಂಡಾಯ ಮಹಿಳಾ ಹೋರಾಟಗಳ ಮೂಲಕ ತಾತ್ವಿಕ ಚಿಂತನೆಗಳು ಬಹುವಾಗಿ ವಾಙ್ಞಯ ಲೋಕದಲ್ಲಿ ಚಲಾವಣೆ ಪಡೆದಿರುವುದು ಇನ್ನೊಂದು ಮುಖ್ಯ ಬೆಳವಣಿಗೆ" ಈ ಹಿನ್ನೆಲೆಯಲ್ಲಿ ತಮ್ಮದಲ್ಲದ ಜನಾಂಗದ ಬದುಕಿನ ಬವಣೆಯನ್ನು ಚಿತ್ರಿಸುವಂಥ ಕಾದಂಬರಿಗಳ ಬದಲಾಗಿ ಆಯಾ ಸಮುದಾಯಕ್ಕೆ ಸೇರಿರುವವರಿಂದಲೇ ಕಾದಂಬರಿ ರಚನೆಗೊಂಡವು. ಈ ದಿಶೆಯಲ್ಲಿಯೇ ದೇವನೂರು ಮಹದೇವರ 'ಒಡಲಾಳ', 'ಕುಸುಮಬಾಲೆ' ಕುಂ. ವೀರಭದ್ರಪ್ಪನವರ 'ಕಪ್ಪು' ಅರವಿಂದ ಮಾಲಗತ್ತಿಯವರ 'ಕಾಯ', ಲಂಕೇಶ್ ರವರ 'ಮುಸ್ಸಂಜೆಯ ಕಥಾ ಪ್ರಸಂಗ' ಮೊದಲಾದವುಗಳು ರಚನೆಗೊಂಡವು. ಹಾಗೆಯೇ ಮಹಿಳೆಯರೂ ಕೂಡ ತಮ್ಮದೇ ಆದ ವಿಶಿಷ್ಟ ಅನುಭವಗಳನ್ನು ಅನಾವರಣಗೊಳಿಸುವ ನಿಟ್ಟಿನಲ್ಲಿ ಹಲವಾರು ಕಾದಂಬರಿಗಳು ಹುಟ್ಟಿ ಬಂದವು.

ಈ ಹಿನ್ನೆಲೆಯಲ್ಲೇ ಎಚ್. ನಾಗವೇಣಿಯವರ 'ಗಾಂಧಿ ಬಂದ' ಕಾದಂಬರಿ ರಚನೆಗೊಂಡಿತು. ಇವರ 'ನಾಕನೇ ನೀರು' ಕಥಾ ಸಂಕಲನದ ಕಥೆಗಳಲ್ಲಿ 'ಗಾಳ' ರಾಜ್ಯಮಟ್ಟದ ಮಾಸ್ತಿ ಕಥಾಸ್ಪರ್ಧೆಯಲ್ಲಿ ಬಹುಮಾನ ಗಳಿಸಿ 'ತರಂಗ' ದಲ್ಲಿ ಪ್ರಕಟಗೊಂಡಿದೆ. ಸೀಮಂತ ಕಥೆಯೂ' ತುಷಾರದಲ್ಲಿ ಪ್ರಕಟಗೊಂಡಿದೆ. ಉದಯವಾಣಿ,. ಪ್ರಜಾವಣಿ ಪತ್ರಿಕೆಗಳಲ್ಲಿ 'ಗಾಂಧಿ ಬಂದ' ಕಾದಂಬರಿಯ ಬಗ್ಗೆ ಪ್ರಕಟವಾಗಿದೆ.

'ಗಾಂಧಿ ಬಂದ', ಎಚ್. ನಾಗವೇಣಿಯವರ ಪ್ರಥಮ ಕಾದಂಬರಿ 'ಗಾಂಧಿ ಬಂದ' ಎಂಬ ಹೆಸರನ್ನು ಹೊತ್ತ ೩೬೫೪ ಪುಟಗಳಿರುವ ಈ ಕಾದಂಬರಿ ದಕ್ಷಿಣ ಕನ್ನಡಕ್ಕೆ ಸ್ವಾತಂತ್ರ್ಯ ಪೂರ್ವದಲ್ಲಿ ಗಾಂಧಿ ಬಂದ ಸಂದರ್ಭವನ್ನು ಹಿನ್ನೆಲೆಯಾಗಿಟ್ಟುಕೊಂಡು ಇಲ್ಲಿನ ಸುಧಾರಣಾವಾದಿಗಳ ಯತ್ನ, ಸಾಮಾಜಿಕ ಸಂಘರ್ಷ ಮತ್ತು ಗಾಂಧೀ ವಾದದ ಹಿನ್ನೆಲೆಯಲ್ಲಿ ದೇಶವನ್ನು ಒಂದುಗೂಡಿಸುವ ಯತ್ನ ಗಾಂಧೀಜಿಯವರ ಭೇಟಿ ಜನಜೀವನದಲ್ಲಿ ತಂದ ಕ್ರಾಂತಿಕಾರಕ ಬದಲಾವಣೆಗಳನ್ನು ಲೇಖಕಿ ಅತ್ಯಂತ ಮನೋಜ್ಞವಾಗಿ ಚಿತ್ರಿಸಿರುವುದು ಈ ಕಾದಂಬರಿಯ ವಿಶೇಷ.

ಲೇಖಕಿಯು ಕಡಲ ತಡಿಯಲ್ಲಿ ಬೆಳೆದವರು, ತುಳುನಾಡ ಸಿರಿಯನ್ನು ಕಂಡವರು, ಅವರು ಹುಟ್ಟಿದ್ದು, ಬೆಳೆದದ್ದು, ಹೊರಜಗತ್ತನ್ನು ನೋಡಿದ್ದು ಎಲ್ಲ ಅಲ್ಲೇ, 'ನಾಕನೇ ನೀರು' ಎಂಬ ಕಥಾ ಸಂಕಲನ, 'ಗಾಂಧಿ ಬಂದ' ಕಾದಂಬರಿಯನ್ನು ಬರೆದಿರುವ ಹೆಚ್.ನಾಗವೇಣಿ ಜೊತೆಗೆ ತುಳುನಾಡಿನ ಬಂಟರ ಸಂಸ್ಕೃತಿಯನ್ನು ಚಿತ್ರಿಸಿದ್ದಾರೆ.

ಮಿಷನರಿಗಳ ಪ್ರಭಾವದಿಂದ ದಕ್ಷಿಣ ಕನ್ನಡ ಜಿಲ್ಲೆ ಆಧುನಿಕ ವಿದ್ಯೆಯನ್ನು ಕರ್ನಾಟಕದ ಇತರ ಜಿಲ್ಲೆಗಳಿಗಿಂತ ಮೊದಲೇ ಪಡೆದಿದ್ದರೂ ಅಸ್ಪೃಶ್ಯತೆಯಂತಹ ಸಮಸ್ಯೆಗಳು ಸ್ವಾತಂತ್ರ್ಯ ಪೂರ್ವದಲ್ಲಿ ಜೀವಂತವಾಗಿದ್ದವು.

ಜಾತಿ ತಾರತಮ್ಯಗಳು, ಜಮೀನ್ದಾರರ ಶೋಷಣೆ, ವಿಧವೆಯರ ಸಮಸ್ಯೆ ಹೀಗೆ ಹತ್ತು ಹಲವು ಸಮಸ್ಯೆಗಳನ್ನು ತಮ್ಮ ತುಳುನಾಡಿನ ಪ್ರಪಂಚದ ತಾಜಾ ಅನುಭಗಳನ್ನು ತಮ್ಮ ಕೃತಿಗಳ ಮೂಲಕ ಆಡು ನುಡಿಯ ಭಾಷೆಯಲ್ಲಿ ಸ್ವೋಪಜ್ಞವಾಗಿ ಕಟ್ಟಿಕೊಟ್ಟಿದ್ದಾರೆ. ಇವರು ಸಹಾಯಕ ಗ್ರಂಥಪಾಲಕಿಯಾಗಿ ಹಂಪಿ ವಿಶ್ವವಿದ್ಯಾಲಯದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಸಾಹಿತ್ಯ ಕ್ಷೇತ್ರಕ್ಕೆ ಮೌಲಿಕ ಕೊಡುಗೆ ನೀಡುವುದರ ಮೂಲಕ ಹಲವಾರು ಪ್ರಶಸ್ತಿ, ಬಹುಮಾನ, ಪುರಸ್ಕಾರ, ಮನ್ನಣೆಗಳಿಗೆ ಪಾತ್ರರಾಗಿದ್ದಾರೆ. ಆದ್ದರಿಂದ ಎಚ್.ನಾಗವೇಣಿ ಅವರ ಸಾಹಿತ್ಯದ ಅಧ್ಯಯನದ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ಅವರು ನೀಡಿದ ಕೊಡುಗೆ ಏನೆಂಬುದನ್ನು ಶ್ರುತಪಡಿಸಿ, ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ಅವರ ಸಾಹಿತ್ಯದ ಮಹತ್ವ ಯಾವ ಬಗೆಯದು ಎಂಬುದನ್ನು ತಿಳಿಸಿಕೊಡುವ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ. ನನ್ನ ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪ ಈ ಕೆಳಕಂಡಂತೆ ಇದೆ.

ಅಧ್ಯಯನದ ಆರಂಭದಲ್ಲಿ ಕನ್ನಡ ಕಾದಂಬರಿ ಬೆಳೆದು ಬಂದ ದಾರಿಯನ್ನು ನವೋದಯ, ಪ್ರಗತಿಶೀಲ, ನವ್ಯ, ದಲಿತ – ಬಂಡಾಯ ಈ ನಾಲ್ಕು ಘಟ್ಟಗಳಲ್ಲಿ ಗುರುತಿಸಲಾಗಿದೆ. ಮೊದಲು ಕಾದಂಬರಿಯ ಪ್ರಕಾರ ಪ್ರಾರಂಭವಾದದ್ದು, ಕನ್ನಡದ ಮೊದಲ ಮಹತ್ವದ ಕಾದಂಬರಿಯ ಬಗ್ಗೆ ಮತ್ತು ಹೆಸರಾಂತ ಕಾದಂಬರಿಗಾರರ ಕಾದಂಬರಿಗಳನ್ನು ಕುರಿತು ವಿವೇಚಿಸಸಲಾಗುವುದು.

ಅಧ್ಯಾಯ ೩ ರಲ್ಲಿ ಕನ್ನಡ ಕಾದಂಬರಿಗಾರ್ತಿಯರ ನಡುವೆ ಎಚ್.ನಾಗವೇಣಿಯವರ ಸ್ಥಾನವನ್ನು ಗುರುತಿಸುವ ಪ್ರಯತ್ನ ಮಾಡಲಾಗುವುದು.

ಅಧ್ಯಾಯ–೪ ರಲ್ಲಿ ತುಳು ಸಂಸ್ಕೃತಿಯ ಸ್ವರೂಪದಲ್ಲಿ ಕರಾವಳಿ ತೀರ ಪ್ರದೇಶದಲ್ಲಿ ತುಳು ಭಾಷೆಯ ಬಗ್ಗೆ ಅವರ ಸಂಪ್ರದಾಯ, ನಂಬಿಕೆ, ಆಚಾರ–ವಿಚಾರಗಳನ್ನು, ಮೌಲ್ಯಗಳನ್ನು ಪ್ರತಿನಿಧಿಸುವ ಮೂಲಕ ಮೌಖಿಕ ಪರಂಪರೆಯಾದ ಪಾಡ್ದನ , ಕಬಿತ ಪ್ರಕಾರಗಳು, ಸಾಂಸ್ಕೃತಿಕ ಸಂಕೀರ್ಣವೊಂದರ ಪರಿಚಯ ಮಾಡಿ ಕೊಡಲಾಗುವುದು.

ಆದ್ಯಾಯ – ೫ ರಲ್ಲಿ 'ಗಾಂಧಿ ಬಂದ' ಕಾದಂಬರಿಯಲ್ಲಿ ಸಾಮಾಜಿಕ – ಸಾಂಸ್ಕೃತಿಕ ನೆಲೆಯಲ್ಲಿ ವಿವರವಾಗಿ, ಆಳವಾಗಿ, ವಿಮರ್ಶಾತ್ಮಕವಾಗಿ ವಿಶ್ಲೇಷಣೆ ಮಾಡಲಾಗಿದೆ. ಮತ್ತು ಆ ಕಾದಂಬರಿಯ

ಸಾಂಸ್ಕೃತಿಕ ಮಹತ್ವವನ್ನು ಪ್ರಕಾಶಗೊಳಿಸಿ, ಅವರ ಸಾಹಿತ್ಯದಲ್ಲಿ ತುಳು ನಾಡಿನ ಸಾಂಸ್ಕೃತಿಕ ವಿಚಾರವನ್ನು ಒಳಗೊಂಡ ಒಂದು ಕಾದಂಬರಿಯಲ್ಲಿ ಸಾಮಾಜಿಕ ವ್ಯವಸ್ಥೆಯ ಕ್ರೌರ್ಯ, ಹಿಂಸೆ, ಶೋಷಣೆಗಳ ವಿರುದ್ಧ ಬಂಡಾಯದ ದನಿಯನ್ನು ಗುರುತಿಸಿ ವಿವರಿಸಿದೆ. ಹಾಗೂ ಅವರ ಭಾಷಾ ಪ್ರಯೋಗದ ಸಾಂಸ್ಕೃತಿಕ ಮಹತ್ವವನ್ನು ವಿವರವಾಗಿ ಪರಿಶೀಲಿಸಲಾಗುವುದು.

ಅಧ್ಯಾಯ-೬ ರಲ್ಲಿ ಪ್ರಮುಖ ಪಾತ್ರಗಳ ಚಿತ್ರಣವನ್ನು ಚಿತ್ರಿಸಿದೆ. ಈ ಕಾದಂಬರಿಯಲ್ಲಿ ಅಂತಪ್ಪ, ಹೆಬ್ಬಾರ, ರುಕುಮಣಿಯಮ್ಮ, ಮಾರಪ್ಪ, ದಾರು, ದ್ರೌಪದಿ ಇವರುಗಳ ವ್ಯಕ್ತಿ ಚಿತ್ರಣ ಸೊಗಸಾಗಿ ಮೂಡಿ ಬಂದಿದೆ. ಈ ಕಾದಂಬರಿಯಲ್ಲಿ ಬರುವ ಎಲ್ಲಾ ಪಾತ್ರಗಳೂ, ಜೀವಂತ ಪಾತ್ರಗಳಾಗಿ ಮೂಡಿಬಂದಿವೆ. ಇವುಗಳಲ್ಲಿ ಪ್ರಮುಖ ಪಾತ್ರಗಳನ್ನು ವಿವರವಾಗಿ ವಿಶ್ಲೇಷಿಸಲಾಗಿದೆ.

---

ಅಡಿ ಟಿಪ್ಪಣಿ

೧. ಕನ್ನಡ ಸಾಹಿತ್ಯ ಸಮೀಕ್ಷೆ, ಡಾ. ಬಿ.ಎನ್. ಸುಮಿತ್ರಾ ಬಾಯಿ, ಪುಟ ೨೬, ೧೯೯೨.

# ಅಧ್ಯಾಯ – ೨

## ಕನ್ನಡ ಕಾದಂಬರಿ ಬೆಳೆದು ಬಂದ ದಾರಿ

ಸಾಹಿತ್ಯ ಒಂದು ಕಲೆ. ಎಲ್ಲ ಕಲೆಗಳಂತೆ ಸಾಹಿತ್ಯವೂ ಪ್ರತಿಭಾವಂತನ ಒಂದು ಸೃಷ್ಟಿ. ಎಲ್ಲಾ ಮನುಷ್ಯರು ಒಂದಲ್ಲ ಒಂದು ರೀತಿಯ ಪ್ರತಿಭಾವಂತರೇ. ಅವರಲ್ಲಿ ವಿಶೇಷವಾಗಿ, ಅಸಾಧಾರಣ ಮಟ್ಟದಲ್ಲಿ, ಜೀವನೋಪಯೋಗಿಯಾದ ಕ್ಷೇತ್ರದಲ್ಲಿ ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಪ್ರಕಟಿಸಿದವರನ್ನು 'ಕಲೆಗಾರ', 'ನೃತ್ಯಗಾರ', ವ್ಯಂಗ್ಯ, ಚಿತ್ರಕಾರ, ನಟ, ವಿಜ್ಞಾನಿ, ಶಿಲ್ಪಿ ಎಂಬ ಪರಿಭಾಷೆಯಿಂದ ಗುರುತಿಸುತ್ತೇವೆ. ಅವುಗಳ ಹಿಂದೆ ಇರಬಹುದಾದ ಪ್ರೇರಣೆ, ಪ್ರಭಾವ, ಒತ್ತಡ, ಆನಂದ, ಅರಿವು, ಮುಂತಾದ ಅಂಶಗಳ ದೃಷ್ಟಿಯಿಂದ ಅವುಗಳ ಮನೋಧರ್ಮವು ಸಾಂಸ್ಕೃತಿಕ ದೃಷ್ಟಿಯಿಂದ ವಿಭಿನ್ನವಾಗಿದ್ದು, ಅವುಗಳು ಒಂದೊಂದೂ ಅನನ್ಯವೆಂದು ನಾವು ಅರಿಯುವುದು ಅವಶ್ಯಕ.

ಸಾಹಿತ್ಯವು ಒಂದು ಸೃಜನಶೀಲ ಮಾನಸಿಕ ವ್ಯಾಪಾರವಾಗಿದ್ದು, ಅದು ಸಾಹಿತಿಯ ಸಮೃದ್ಧಿ, ಬದುಕಿನ ಅನುಭವ, ಆತನ ಪ್ರತಿಭೆ, ಲೋಕಾನುಭವ, ದೃಢವಾದ ಜ್ಞಾಪಕ ಶಕ್ತಿ, ವಿವಿಧ ಕಲೆಗಳ ಪರಿಚಯ ಪ್ರಾಮಾಣಿಕ ಮನೋಧರ್ಮ, ಪರಂಪರೆ ಮತ್ತು ಚಾರಿತ್ರಿಕ ಅರಿವು ಮುಂತಾದ ಸಂಸ್ಕಾರಗಳ ಹಿನ್ನಲೆಯಲ್ಲಿ ಮಾಡಿದ ಒಂದು ಅನನ್ಯ ಕಲೆ ಆಗಿದ್ದು, ಇದು ಸಾಹಿತಿಯ ಯುಗ ಮನೋಧರ್ಮದ ಭೌಗೋಳಿಕತೆ, ಸಾಮಾಜಿಕತೆ, ರಾಜಕೀಯತೆ, ಧಾರ್ಮಿಕತೆ, ಆರ್ಥಿಕತೆ ಹಾಗೂ ಸಾಂಸ್ಕೃತಿಕತೆಯ ಹಿನ್ನೆಲೆಯಿಂದ ರೂಪಿತವಾದ ಒಂದು ಚಾರಿತ್ರಿಕ ಆಕೃತಿಯು ಕೂಡ ಆಗಿರುತ್ತದೆ.

ಸಾಹಿತ್ಯವು ನಿಂತ ನೀರಲ್ಲ. ನಿತ್ಯವೂ ಹರಿಯುವ ಜೀವ ನದಿಯಂತೆ, ಅದು ಕಾಲ ಕಾಲಕ್ಕೆ ನಡೆಯುವ ಬದಲಾವಣೆಗೆ ಅನುಗುಣವಾಗಿ ತನ್ನ ಗತಿಯನ್ನು, ಗಮನವನ್ನು ಬದಲಿಸುತ್ತ ಹರಿಯುತ್ತಿರುತ್ತದೆ. ಹಾಗಾಗಿ ಸಾಹಿತಿಯು ನಿರಂತರವಾದ ಒಳಗಿನ ಮತ್ತು ಹೊರಗಿನ ಬದುಕಿನ ಬವಣೆಗಳಿಂದ ನಿರಂತರ ಅಭಿವ್ಯಕ್ತಿಯನ್ನು ಪಡೆದುಕೊಳ್ಳುವ ಒಂದು ಸಹಜ ಕ್ರಿಯೆ. ಇದರಿಂದ ಬದಲಾಗುವ ಬದುಕಿನ ಸಂಕ್ರಮಣಗಳಿಗೆ ಆತನ ಮನಸ್ಸು ತೆರೆದುಕೊಳ್ಳುವುದರಿಂದ ಸಾಹಿತ್ಯ ಚರಿತ್ರೆಯ ಘಟ್ಟಗಳೂ ರೂಪುಗೊಳ್ಳುವುದು ಸಹಜ. ಅಂದಿನ ಸಾಹಿತ್ಯ ರಚನೆಯ ಏಳು–ಬೀಳಿನ, ದೃಷ್ಟಿ, ಧೋರಣೆಯನ್ನು ಮಾತ್ರ ಹೇಳುವುದಿಲ್ಲ, ಬದಲಾಗಿ ಆಯಾಯ ಯುಗಧರ್ಮದ ಸಮಗ್ರ ಸಮಾಜದ ಸಾಂಸ್ಕೃತಿಕ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ. ಸಾಹಿತ್ಯದ ಚರಿತ್ರೆಯು ನಿರಂತರವಾದ ಕ್ರಾಂತಿ

ಚಳುವಳಿಗಳ, ಪ್ರಯೋಗಗಳ ಕತೆಯೇ ಆಗಿರುತ್ತದೆ. ಹಾಗೆಯೇ ಕನ್ನಡ–ಭಾಷೆಯಲ್ಲೂ ನವ್ಯತೆಯ ಕಾಲ ಕಾಲಕ್ಕೂ ಕಂಡು ಬರುತ್ತಿದೆ.

'ಆಧುನಿಕ ಕನ್ನಡ ಸಾಹಿತ್ಯವು' ೨೦ನೇ ಶತಮಾನದ ಸಾಹಿತ್ಯವೆಂದು ಗುರುತಿಸುತ್ತೇವೆ. ೧೯ನೇ ಶತಮಾನದ ಉತ್ತರಾರ್ಧದಲ್ಲಿ ಈ ಹೊಸ ಸಾಹಿತ್ಯದ ಬೀಜಗಳು ಮೊಳೆತು, ಬೆಳೆ ಹುಲುಸಾಗಿ ಕೈಗೆ ಬಂದದ್ದು ೨೦ನೇ ಶತಮಾನದಲ್ಲಿ. ವಸಾಹತುಶಾಹಿ ಸಂಸ್ಕೃತಿಯ ಪರಿಣಾಮದ ಫಲದಿಂದ ಪ್ರವೇಶವಾದ ಅಂದಿನ ಆಂಗ್ಲ ವಿದ್ಯಾಭ್ಯಾಸ, ಮುದ್ರಣ, ಆಡಳಿತ ವ್ಯವಹಾರ, ಹೊಸ ಶಿಕ್ಷಣ ಪದ್ಧತಿ, ಹೊಸ ವಿಚಾರ ಸರಣಿ, ವಿಜ್ಞಾನ, ತಂತ್ರಜ್ಞಾನ, ಇಂಗ್ಲೀಷ್ ಸಾಹಿತ್ಯ, ವಿಶ್ವಸ್ಥ ಪ್ರಜ್ಞೆ, ಕೈಗಾರೀಕರಣ, ಸಂಸ್ಕೃತೀಕರಣ, ಅಂದಿನ ಆಂಗ್ಲ ಕ್ರೈಸ್ತ ಮಿಶನರಿಗಳು ಧಾರ್ಮಿಕವಾಗಿ, ಸಾಂಸ್ಕೃತಿವಾಗಿ ಮತ್ತು ಸಾಮಾಜಿಕವಾಗಿ ಉಂಟು ಮಾಡಿದ ಎಚ್ಚರ – ಹೀಗೆ ಮೊದಲಾದ ಅಂಶಗಳು ಪರಂಪರೆಯೊಂದಿಗೆ ಮುಖಾಮುಖಿ ಆಗುವ ಮೂಲಕ ಬಂದ ಭಾರತೀಯ ಬದುಕನ್ನು ತಲ್ಲಣವನ್ನುಂಟು ಮಾಡಿದವು. ಹಾಗೆಯೇ ಅದರಿಂದ ಮಹತ್ತರವಾದ ಬದಲಾವಣೆ ಯನ್ನುಂಟು ಮಾಡುವ ಮೂಲಕ, ಇದು ಅಂದಿನ ಸಮಗ್ರ ಭಾರತೀಯ ಸಾಂಸ್ಕೃತಿಕ ಬದುಕಿನಲ್ಲಿ ಒಂದು ಹೊಸ ಇತಿಹಾಸವನ್ನೇ ಉಂಟು ಮಾಡಿತು. ವ್ಯಕ್ತಿಯ ಬದುಕಿನಲ್ಲಿ ಹೊಸ ದೃಷ್ಟಿ ಧೋರಣೆ, ಸ್ವಾತಂತ್ರ್ಯ ಪ್ರಜ್ಞೆ, ರಾಷ್ಟ್ರೀಯ ಮನೋಧರ್ಮ, ಸಾಂಸ್ಕೃತಿಕ ಪುನರುಜ್ಜೀವನ, ವೈಜ್ಞಾನಿಕ ಮನೋಭಾವನೆ, ಪ್ರಾದೇಶಿಕ ಮತ್ತು ಭಾರತೀಯ ಭಾವೈಕ್ಯತೆ, ಪ್ರಜಾಪ್ರಭುತ್ವದ ಆಸ್ಥೆ, ವಿಶ್ವಸ್ಥ ಪ್ರಜ್ಞೆ, ರಾಜಕೀಯ ಅರಿವು ಸರ್ವೋದಯ, ಸಮಾನತೆ ಮತ್ತು ಸಹೋದರತ್ವ, ಮಾನವೀಯ ಪ್ರೇಮ, ಜಾತ್ಯಾತೀತ ಮನೋಧರ್ಮ, ದೇಶಾಭಿಮಾನ ಇನ್ನೂ ಮೊದಲಾದ ಹೊಸ ಆಶೋತ್ತರಗಳು ಕಾಣಿಸಿಕೊಳ್ಳುವ ಮೂಲಕ, ಆಧುನಿಕ ಕನ್ನಡ ಸಾಹಿತ್ಯದ ಉದಯಕ್ಕೆ ಕಾರಣವಾದವು.

ಆಧುನಿಕ ಕನ್ನಡ ಸಾಹಿತ್ಯ ನಾಲ್ಕು ಪ್ರಮುಖ ಘಟ್ಟಗಳಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯ ಸಾಹಿತ್ಯದ ಪ್ರಮುಖ ಧಾರೆಗಳಾಗಿ, ಅವುಗಳ ಪ್ರಮುಖ ಧೋರಣೆ, ನಿಲುವು, ಅದಮ್ಯ ಒಲವು, ಬದ್ಧತೆ, ಆಶಯ, ಮೌಲಿಕತೆ ವೈಶಿಷ್ಟ್ಯತೆಗಳನ್ನು ಅರಿಯುವುದು. ಈ ನಾಲ್ಕು ಘಟ್ಟಗಳಲ್ಲಿ ಸಾಹಿತ್ಯ ಪ್ರಕಾರವಾದ ಕಾದಂಬರಿ ನಡೆದು ಬಂದ ದಾರಿಯನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗುವುದು.

ಕಾದಂಬರಿ ಎಲ್ಲ ಆಧುನಿಕ ಸಾಹಿತ್ಯಗಳಂತೆ ಕನ್ನಡದಲ್ಲಿಯೂ ಅತ್ಯಂತ ಲೋಕಪ್ರಿಯವಾದ ಸಾಹಿತ್ಯ ಪ್ರಕಾರವಾಗಿ ಬೆಳೆದು ಬಂದಿದೆ. ಕಾದಂಬರಿ ಅತ್ಯಂತ ಪ್ರಭಾವಶಾಲಿ ಮತ್ತು ಜನಪ್ರಿಯ ಪ್ರಕಾರವಾಗಿದೆ. ಈ ಸಾಹಿತ್ಯ ಪ್ರಕಾರವು ಸಾಮಾನ್ಯ ಜನರ ಆಶೋತ್ತರಗಳನ್ನು, ಅಭಿರುಚಿಗಳನ್ನು ಯುಗಧರ್ಮ ಮತ್ತು ಸಂಸ್ಕೃತಿಯ ಮಟ್ಟವನ್ನು ವಿವರವಾಗಿ ಪ್ರತಿಬಿಂಬಿಸುವ ಮಾಧ್ಯಮವಾಗಿದೆ.

ಆದ್ದರಿಂದ ಉಳಿದ ಸಾಹಿತ್ಯ ಪ್ರಕಾರಗಳಿಗಿರುವ ರೂಪ ಲಕ್ಷಣಗಳು, ನಿಯಮ ನಿಬಂಧಗಳು ಇದಕ್ಕೆ ವಿಶಿಷ್ಟವಾಗಿರುವುದಿಲ್ಲ. ನಾಟಕದಂತೆ ಇದು ಪರಿಪೂರ್ಣತೆಯನ್ನು ಹೊಂದಿದ ರೂಪವಾಗಿರದೆ, ಇನ್ನೂ ಬೆಳವಣಿಗೆಯನ್ನು ಪಡೆಯುತ್ತಲಿದೆ. ಕಾದಂಬರಿ ಒಬ್ಬ ಲೇಖಕನದೇ ಕೃತಿಯಾಗಿರುವುದರಿಂದ; ಅದು ಪರಿಪೂರ್ಣತೆಯನ್ನು ಪಡೆದಿರುತ್ತದೆ. ಮಹಾಕಾವ್ಯ ಒಂದು ಕಾಲಕ್ಕೆ ತನ್ನ ಉದ್ದೇಶವನ್ನು ಸಾಧಿಸಿ ಐತಿಹಾಸಿಕವಾಗಿ ಮಾತ್ರ ಬದುಕಿರುವ ಸಾಹಿತ್ಯ ಪ್ರಕಾರವಾದರೆ, ಕಾದಂಬರಿ ಸಮಕಾಲೀನ ಜೀವನಕ್ಕೆ ತೀರ ಹತ್ತಿರವಾಗಿದ್ದು, ಯೋಗ್ಯವಾದ ಜನರ ನಿಕಟ ಸಾಹಿತ್ಯ ಪ್ರಕಾರವಾಗಿದೆ.

ನವೋದಯ ಪೂರ್ವ ಅಥವಾ ನವೋದಯದ ಪ್ರಥಮ ಘಟ್ಟದಲ್ಲಿಯೇ ಸಣ್ಣ ಕಥೆ ಮತ್ತು ಕಾದಂಬರಿ ಕನ್ನಡದಲ್ಲಿ ಬಂದವು. ಕಾದಂಬರಿ ಕನ್ನಡಕ್ಕೆ ಬಂದದ್ದು ಈ ಕಾಲದಲ್ಲೆ – ಬಂಗಾಳಿಯ ಮೂಲಕ. ಬಂಕಿಮರ 'ದುರ್ಗೇಶ ನಂದಿನಿ' ಯನ್ನು ೧೮೮೫ ರಲ್ಲಿ ವೆಂಕಟಾಚಾರ್ಯರು ಕನ್ನಡಕ್ಕೆ ಅನುವಾದಿಸಿದರು. ೧೮೯೭ ರಲ್ಲಿ ಗುಬ್ಬಿ ಮುರುಗಾರಾಧ್ಯರ ಸ್ವತಂತ್ರ ಕೃತಿ 'ಶೃಂಗಾರ ಚಾತುರ್ಯೋಲ್ಲಾಸಿನಿ ಪ್ರಕಟವಾಯಿತು. ೧೮೯೯ ರಲ್ಲಿ ಗುಲ್ವಾಡಿ ವೆಂಕಟರಾಯರ 'ಇಂದಿರಾ' ಪ್ರಕಟವಾಯಿತು.

೧೯೦೫ ರಲ್ಲಿ ಬೋಳಾರ ಬಾಬುರಾಯರ 'ವಾಗ್ದೇವಿ' ಎಂಬ ಕಾದಂಬರಿಯನ್ನು ಹೊರ ತಂದರು. ಈ ಕಾದಂಬರಿಯ ಮೂಲಕ ಹಾಸ್ಯವು ಕಾಲಿಟ್ಟಿತ್ತು. ಸಾಹಿತ್ಯದ ದೃಷ್ಟಿಯಿಂದಲೂ ಕರೆಯಬಹುದಾದ ಕೃತಿಯೊಂದು ಪ್ರಕಟವಾಯಿತು. ಎಂಎಸ್.ಪುಟ್ಟಣ್ಣ ನವರ 'ಮಾಡಿದ್ದುಣ್ಣೋ ಮಹರಾಯ' [೧೯೧೫] ಇನ್ನೂ ಮುಂತಾದವರು ಆದ್ಯ ಪ್ರಮುಖರು ಕನ್ನಡ ಕಾದಂಬರಿಕಾರರಾಗಿ ಗಮನಾರ್ಹತೆ ಪಡೆದುಕೊಂಡರು. ೧೯೩೦ ರ ನಂತರ ದೇವುಡು, ಮಾಸ್ತಿ, ಶಿವರಾಮಕಾರಂತ, ಕುವೆಂಪು, ಮಿರ್ಜಿ ಅಣ್ಣರಾಯ, ಶ್ರೀರಂಗ, ಬೆಟಗೇರಿ ಕೃಷ್ಣಶರ್ಮ, ರಂ.ಶ್ರೀ ಮುಗಳಿ, ರಾವಬಹದ್ದೂರ್, ಅ.ನ.ಕೃಷ್ಣರಾಯ ಮುಂತಾದವರು ಕಾದಂಬರಿ ರಚನೆಯಲ್ಲಿ ಮಹತ್ವದ ಸಾಧನೆ ಮಾಡಿದರು.

ಶಿವರಾಮ ಕಾರಂತರ 'ಚೋಮನದುಡಿ', 'ಅಳಿದ ಮೇಲೆ', 'ಬೆಟ್ಟದ ಜೀವ', 'ಮರಳಿ ಮಣ್ಣಿಗೆ' 'ಮೈಮನಗಳ ಸುಳಿಯಲ್ಲಿ', ಕುವೆಂಪುರವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ ಮತ್ತು ಮಲೆಗಳಲ್ಲಿ ಮದುವೆಗಳು' ಎಂಬ ಎರಡು ಮಹಾಕಾದಂಬರಿಗಳು, ಮಾಸ್ತಿಯವರ 'ಚೆನ್ನಬಸವ ನಾಯಕ' ಮತ್ತು 'ಚಿಕವೀರ ರಾಜೇಂದ್ರ', ಬೆಟಗೇರಿ ಕೃಷ್ಣ ಶರ್ಮರ 'ಸುದರ್ಶನ', ಮುಗಳಿಯವರ 'ಬಾಳುರಿ', 'ಅನ್ನ', 'ಜಡಭರತ', 'ಧರ್ಮಸೆರೆ', ಶ್ರೀರಂಗರ 'ವಿಶ್ವಾಮಿತ್ರ ಸೃಷ್ಟಿ, ಮಿರ್ಜಿ ಅಣ್ಣರಾಯರ 'ನಿಸರ್ಗ', ರಾವ್ ಬಹುದ್ದೂರರ 'ಗ್ರಾಮಾಯಣ', ಅ.ನ.ಕೃ. ಅವರ 'ಸಂಧ್ಯಾರಾಗ', ರಾವ್‌ಬಹುದ್ದೂರರ 'ಗ್ರಾಮಾಯಣ', ಅ.ನ.ಕೃ ಅವರ 'ಸಂಧ್ಯಾರಾಗ', 'ನಟಸಾರ್ವಭೌಮ' ಮುಂತಾದ ಮಹತ್ವದ ಕಾದಂಬರಿಗಳು ಈ

ಕಾಲದಲ್ಲಿ ರಚನೆಯಾದವು. ಹಾಗೆಯೇ ಅನಂತರದಲ್ಲಿ ಜನಸಾಮಾನ್ಯರ ಬದುಕಿನ ಮೇಲೆ ಕೆಲವು ಕಾದಂಬರಿಗಳು ಅತ್ಯಂತ ಪರಿಣಾಮಕಾರಿ ಯಾಗಿ ಚಲನಚಿತ್ರದ ಮುಖಾಂತರ ಪ್ರಭಾವ ಬೀರಿದವು. ಈ ಕಾದಂಬರಿಗಳು ಇವತ್ತಿಗೂ ಜನರ ಮನದಾಳದಲ್ಲಿ ನೆಲೆಯಾಗಿ ನಿಂತಿರುವುದು ಕಂಡು ಬರುತ್ತದೆ. ಹೀಗೆ ಕಾದಂಬರಿಗಳು ಜನರ ಬದುಕಿಗೆ ಮತ್ತು ಜೀವನಕ್ಕೆ ಹತ್ತಿರವಾಗಿವೆಯಲ್ಲವೆ?

ವೆಂಕಟಚಾರ್ಯರು ಸರಳವಾದ ಕನ್ನಡವನ್ನು ಉಪಯೋಗಿಸಿ 'ಆನಂದ ಮಠ', 'ವಿಷವೃಕ್ಷ' ಕಾದಂಬರಿಗಳಲ್ಲಿ ಪ್ರಕೃತಿ ವರ್ಣನೆ ಹಾಗೂ ಸ್ತ್ರೀ ವರ್ಣನೆಗಳನ್ನು ತಂದಿದ್ದಾರೆ. ಗಳಗನಾಥರು ಮತ್ತು ವೆಂಕಟಾಚಾರ್ಯರು ಕನ್ನಡ ಕಾದಂಬರಿಯನ್ನು ಸಾಮಾನ್ಯ ಜನತೆಯವರೆಗೆ ಕೊಂಡೊಯ್ದರು.

ಬೋಳಾರ ಬಾಬು ರಾಯರ 'ವಾಗ್ದೇವಿ' ಯಲ್ಲಿ ವೈಧಿಕ ಸಮಾಜದ ಅವನತಿಯ ಚಿತ್ರಣವೊಂದನ್ನು ನೀಡಿದ್ದಾರೆ. ಮಠದ ಪವಿತ್ರ ವಾತಾವರಣವನ್ನು ಕಲುಷಿತಗೊಳಿಸಿರುವುದು ಇಲ್ಲಿಯ ಕಥಾವಸ್ತು.

ಕಾದಂಬರಿಯ ಪ್ರಕಾರವನ್ನು ಕನ್ನಡದಲ್ಲಿ ಯಶಸ್ವಿಯಾಗಿ ತಂದವರು ಎಂ.ಎಸ್. ಪುಟ್ಟಣ್ಣನವರು ಕಾದಂಬರಿಗಳಿಗೆ ವಸ್ತು ನಮ್ಮಲ್ಲೇ ವಿಪುಲವಾಗಿದೆ ಎಂಬುದನ್ನು ಕಂಡು ಕೊಂಡ ಮೊದಲಿಗರಲ್ಲಿ ಪುಟ್ಟಣ್ಣನವರೂ ಒಬ್ಬರು. ಕಾದಂಬರಿ ಪ್ರಕಾರ ಕನ್ನಡಕ್ಕೆ ತೀರಾ ಹೊಸದಾಗಿದ್ದ ಕಾಲದಲ್ಲಿ, ಅವರು ತಮ್ಮ ಕಾದಂಬರಿಗಳ ಮೂಲಕ ಕನ್ನಡ ಕಾದಂಬರಿ ಗಳಿಗೆ ಸುಭದ್ರವಾದ ಅಡಿಪಾಯವನ್ನು ಹಾಕಿದವರು. ಪುಟ್ಟಣ್ಣನವರು 'ಮಾಡಿದ್ದುಣ್ಣೋ ಮಹಾರಾಯ' [೧೯೧೫], 'ಮುಸುಗು ತೆಗೆಯೇ ಮಾಯಾಂಗನೆ' [೧೯೨೮] ಮತ್ತು 'ಅವರಿಲ್ಲದೂಟ' [೧೯೩೯] ಎಂಬ ಮೂರು ಕಾದಂಬರಿಗಳನ್ನು ರಚಿಸಿದ್ದಾರೆ. ಈ ಕಾದಂಬರಿಗಳಲ್ಲಿ ಪುಟ್ಟಣ್ಣನವರು ಚಿತ್ರಿಸಿರುವುದು ಬ್ರಿಟಿಷ್ ಅಧಿಪತ್ಯದ ಆಶ್ರಿತ ಸಂಸ್ಥಾನವಾದ ಮೈಸೂರನ್ನು ಆ ದಿನಗಳ ಕನ್ನಡಿಗರ ಬಾಳು ಬದುಕು, ಅರಮನೆ, ಗುರುಮನೆಗಳ ಪರಿಸರ, ಅವರ ಪೂವಾಚರ ಶ್ರದ್ಧೆ, ವಿದ್ಯಾಭ್ಯಾಸ, ಕುಟುಂಬ ಕಲಹಗಳು, ಜನರ ನೇರ ಕೊಂಕುಗಳು ಚಿತ್ರಿತವಾಗಿವೆ.

ಪುಟ್ಟಣ್ಣನವರ ಮೂರು ಕಾದಂಬರಿಗಳ ವಸ್ತು ಹಾಗೂ ಅದರ ವಿಶ್ಲೇಷಣೆ ಹಲವು ಕುತೂಹಲಕರ ಅಂಶಗಳನ್ನು ಹೊರಚೆಲ್ಲುತ್ತವೆ. ವಸ್ತುವಿನ ಮೂಲಕ ಪುಟ್ಟಣ್ಣನವರು ಧ್ವನಿಸುವ ಸಾಮಾಜಿಕ ಸಂಬಂಧಗಳು, ಪರಿಸ್ಥಿತಿಗಳ ಚಿತ್ರಣ ಮುಖ್ಯ. ನ್ಯಾಯಕ್ಕೆ ಗೆಲವು, ಅನ್ಯಾಯಕ್ಕೆ ಸೋಲು ಎಂಬುದು ಇಲ್ಲಿ ಮುಖ್ಯ ಸ್ಥಾಯಿ. ನ್ಯಾಯ ಎಂಬುದು ಪ್ರಾಮಾಣಿಕತೆಯ ಯಾವ ಒಂದು ರೂಪವಾದರೂ ಆಗಬಹುದು. ಹೆಚ್ಚಿನ ಮಟ್ಟಿಗೆ ಸ್ತ್ರೀಯ ಪಾತಿವ್ರತ್ಯ ಇದಕ್ಕೆ ರೂಪು ಕೊಡುತ್ತದೆ. ಹಣದ ಆಸೆಗೆ ಬಿದ್ದು ಸಮಾಜದ ನಿಯಮಗಳನ್ನು ಮೀರಲೆತ್ನಿಸುವವರಿಗೆ ಉಳಿಗಾಲವಿಲ್ಲ. ಕಥೆಯ ಸಂವಿಧಾನ ಜಾಳಲ್ಲವಾದುದರಿಂದಲೂ,

ಆಡು ನುಡಿಯಿಂದಲೂ ಕಾದಂಬರಿಯಲ್ಲಿ ಅಂತರ್ಗತವಾದ ನೀತಿಬೋಧೆ ಕೃತಿಗೆ ಹೊರತಾಗಿಲ್ಲ. ಪುಟ್ಟಣ್ಣ ನವರು ತಮ್ಮ ಕಾದಂಬರಿಯಲ್ಲಿ ಆಡು ನುಡಿಯ ಬನಿಯನ್ನು ಬಳಸಿಕೊಂಡಿದ್ದು, ಕನ್ನಡ ಜನತೆಗೆ ಕನ್ನಡ ಜನರ ಆಚಾರ ವಿಚಾರಗಳನ್ನು ಕನ್ನಡದ ನುಡಿಗಟ್ಟಿನಿಂದ ಶ್ರೀಮಂತವಾದ ಶೈಲಿಯಲ್ಲಿ ನಿರೂಪಿಸಿದ್ದು.

ಎಂ.ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಹಾರಾಯ' ಅನೇಕ ಅಂಶಗಳಲ್ಲಿ ಗಮನಾರ್ಹವಾದ ಕೃತಿಯಾಗಿದೆ. ಪುರಾಣ ಇತಿಹಾಸಗಳ ಆದರ್ಶ ಪಾತ್ರಗಳು ತಮ್ಮ ಸಾಹಿತ್ಯಿಕ ಆತ್ಮಗಳನ್ನು ಕಳೆದುಕೊಂಡಿರುವುದರಿಂದ ವಾಸ್ತವ ವ್ಯಕ್ತಿಗಳ ಜೀವಂತ ತನದಲ್ಲಿ ಆದರ್ಶವನ್ನು ಕಾಣುವ ಮಹತ್ವದ ಪ್ರಯೋಗವನ್ನು ಪುಟ್ಟಣ್ಣನವರು ಈ ಕಾದಂಬರಿಯಲ್ಲಿ ಮಾಡಿದ್ದಾರೆ. ನಾಗಪ್ಪಯ್ಯ ವಿದ್ಯಾರ್ಥಿಗಳಿಗೆ ತೋರಿಸುವ ಕ್ರೌರ್ಯ, ವಿದ್ಯಾರ್ಥಿಗಳ ಪ್ರತಿಕ್ರಿಯೆ, ಕೊನೆಗೆ ಬರುವ ಕಳ್ಳನಾದ ಅಮಾಸೆಯ ಆತ್ಮಚರಿತ್ರೆಯ ಈ ಕತೆಗಳು ಕನ್ನಡದ ಪರಂಪರೆಯಲ್ಲಿ ಕೊನೆಯವರೆಗೆ ನಿಲ್ಲುವ ಸಾಹಿತ್ಯದ ನಮೂನೆಗಳಾಗಿವೆ. ಲಂಚ ತಿಂದು ಏನೂ ಅರಿಯದವನಂತೆ ನಟಿಸುವ ಅಮೀಲ, ಚಿಟಿಕೆ ನಶ್ಯಕ್ಕಾಗಿ ಮನೆಯ ರಹಸ್ಯಗಳನ್ನೆಲ್ಲ ಬಯಲು ಮಾಡುವ ಕೃಷ್ಣಸ್ವಾಮಿಯ ಹರಟೆ, ತಿಮ್ಮಕ್ಕನ ಕೊಂಕು ಸ್ವಭಾವ, ಚಂದ್ರಹಾಸನ ಸತ್ವಯುತವಾದ ಮಾದರಿಗಳಾಗಿವೆ. ಪುಟ್ಟಣ್ಣನವರ ಶೈಲಿ ಕೂಡ ಆಶ್ಚರ್ಯಕರವೆನ್ನಿಸುವಷ್ಟು ಸಹಜವಾಗಿದೆ. ಸರಳವಾದ ವರ್ಣನೆಗಳು, ಗಾದೆ ಮಾತುಗಳು, ಬರುವ ಸಂಭಾಷಣೆಗಳು ನಾವು ಓದುತ್ತಿರುವುದು ಕತೆಯಲ್ಲ ಅನುಭವದ ನೈಜ ಚಿತ್ರವೆಂದು ಭ್ರಮೆ ಹುಟ್ಟಿಸುತ್ತದೆ.

ಕೆರೂರು ವಾಸುದೇವಾಚಾರ್ಯರ 'ಇಂದಿರೆ' ಮಾತ್ರ ಆಗಲೇ ಅನೇಕರ ಗಮನವನ್ನು ಸೆಳೆದಿತ್ತು. ಬಂಗಾಲಿ ಹಾಗೂ ಇಂಗ್ಲೀಷ್ ಕಾದಂಬರಿಗಳು ತೀವ್ರ ಪ್ರಭಾವದಿಂದ ಕೆರೂರರಲ್ಲಿ ವಿಡಂಬನೆ ದೃಷ್ಟಿ. ಈ ಕಾದಂಬರಿಯ ಭಾವ ಚಿತ್ರಣವನ್ನು ಮುಸುಕುಗೊಳಿಸಿವೆ.

ಈ ಮೂರು ಸಾಮಾಜಿಕ ಕಾದಂಬರಿಗಳ ಕನ್ನಡ ಕಾದಂಬರಿಯ ಸ್ವರೂಪವನ್ನು ನಿಶ್ಚಿತಗೊಳಿಸಿದವು. ಈ ಎಲ್ಲ ಪ್ರಯತ್ನಗಳ ಹಿನ್ನೆಲೆಯಲ್ಲಿ ಹೊಸ ಕಾದಂಬರಿಯ ಹುಟ್ಟು ಬೆಳೆದು ಬಂದಿದೆ. ನಮ್ಮ ಸಾಹಿತ್ಯದ ನವೋದಯ ಕಾಲಕ್ಕೆ ಬಂದ ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಯೇ ಮುಖ್ಯವಾಗಿದ್ದರೂ ಹೊಸ ಹೊಸ ಪ್ರಯೋಗಗಳು ನಡೆದಿರುವುದು ಕಂಡು ಬಂದಿದೆ.

ಕನ್ನಡ ಕಾದಂಬರಿಯ ಸಂದರ್ಭದಲ್ಲಿ ನವೋದಯ ಕಾದಂಬರಿಕಾರ ವಾಸ್ತವ ಮಾರ್ಗವನ್ನೇ ಆಯ್ದುಕೊಂಡಿರುವುದಕ್ಕೆ ಮುಖ್ಯ ಕಾರಣ ಅವನಿಗೆ ತನ್ನ ಪರಿಸರದಲ್ಲಿ ಹುಟ್ಟಿದ ಆಸ್ಥೆ. ಇದು ಅವನ ಅಸ್ತಿತ್ವದ ಶೋಧದ ಅಂಗವೂ ಆಗಿತ್ತು. ಈ ಲೇಖಕರು ಪರಿವರ್ತನೆಯ ಹಾದಿಯಲ್ಲಿ ತಮ್ಮ ಸಮಾಜವನ್ನೇ ವಸ್ತುವನ್ನಾಗಿ ಆರಿಸಿಕೊಂಡರು. ವೈವಿಧ್ಯಪೂರ್ಣವಾದ ಕರ್ನಾಟಕದ ಪ್ರಾದೇಶಿಕ

ಜೀವನವನ್ನು ದಾಖಲೆಗೊಳಿಸಿದ ಅನೇಕ ಒಳ್ಳೆಯ ಕಾದಂಬರಿಗಳು ಈ ಮಾರ್ಗದಲ್ಲಿ ಹುಟ್ಟಿಕೊಂಡವು. ಕಾರಂತರ 'ಮರಳಿ ಮಣ್ಣಿಗೆ' ಯಲ್ಲಿ ದಕ್ಷಿಣ ಕನ್ನಡದ ಕರಾವಳಿ ಜೀವನ. ಪುಟ್ಟಪ್ಪನವರ 'ಕಾನೂರು ಹೆಗ್ಗಡತಿಯಲ್ಲಿ ಮಲೆನಾಡಿನ ಬಾಳು, ಗೋಕಾಕರ ಇಜ್ಜೋಡಿನಲ್ಲಿ ಉತ್ತರ ಕರ್ನಾಟಕದ ಬದುಕನ್ನು ಚಿತ್ರಿಸಿದ್ದಾರೆ.

ಆನಂದ ಕಂದರ ಕಾದಂಬರಿಗಳಲ್ಲಾದ 'ರಾಜಯೋಗಿ' ಮತ್ತು 'ಅಶಾಂತಿ ಪರ್ವ' ಗಳಲ್ಲಿ ಆದರ್ಶತ್ವ ತುಂಬಿದೆ. ಗೋಕಾಕರ 'ಇಜ್ಜೋಡು' ಕಾದಂಬರಿಯಲ್ಲಿ ವಿಷಮ ದಾಂಪತ್ಯದಲ್ಲಿ ಬೆಂದು ಹೋದ ಸಹನೆಯ ಮೂರ್ತಿ ಪದ್ಮಾವತಿಯ ಕಥೆಯಿದೆ.

ಶ್ರೀ ರಂಗರು ೧೯೩೪ ರಲ್ಲಿ 'ವಿಶ್ವಾಮಿತ್ರನ ಸೃಷ್ಟಿ' ಇನ್ನೂ ಹತ್ತು ಕಾದಂಬರಿಗಳನ್ನು ಬರೆದಿದ್ದಾರೆ. 'ಪುರುಷಾರ್ಥ' ದಲ್ಲಿ ತಿಲಕರ ಮರಣ [೧-೮-೧೯೨೦] ದಿಂದ ಸ್ವಾತಂತ್ರ್ಯ ದೊರೆತ ದಿನ [೧೫-೮-೧೯೪೭] ವರೆಗಿನ ರಾಜಕೀಯ ಚರಿತ್ರೆಯನ್ನು ಬಳಸಿದ್ದಾರೆ.

೧೯೨೮ ರಲ್ಲಿ ಪ್ರಕಟವಾದ ಮಾಸ್ತಿಯವರ ಸುಬ್ಬಣ್ಣ ಕಾದಂಬರಿಯು ಉದಯಕಾಲದ ಮೊದಲ ಅಭಿಜ್ಞಾತ ಕೃತಿ ಎಂದು ಹೇಳಬಹುದು. ಆಧುನಿಕ ಸಂವೇದನೆಗೆ ಒಪ್ಪಿತವಾಗುವ ವಾಸ್ತವ, ಕಲ್ಪನೆಗಳ ಸರಿಯಾದ ಪಾಕ ಇಲ್ಲಿ. ಸುಬ್ಬಣ್ಣನ ಕತೆ ಮಾಸ್ತಿಯವರು ನವರತ್ನ ರಾಮರಾಯರಿಂದ ಕೇಳಿದ ಅವರ ಪರಿಚಯದ ಗಾಯಕ ಶಾಮಣ್ಣನ ಕತೆ. ಅವರೇ ಹೇಳುವ ಹಾಗೆ "ಬರೆಯುವ ಮೊದಲೇ ಶ್ರುತ ಕಲ್ಪಿತ, ಎರಡೂ ಒಂದನ್ನೊಂದು ತಿದ್ದಿ ಸರಿಮಾಡಿ ಹೊಂದಿಕೊಂಡು, ಸುಸಂಬದ್ಧವಾದ ಒಂದು ಇತಿಹಾಸವು ಆಗಿದ್ದವು".

'ಸುಬ್ಬಣ್ಣ' ಒಬ್ಬ ಕಲಾವಿದನ ಕತೆ. ಈ ಕತೆಯ ನಾಯಕ ಸುಬ್ಬಣ್ಣ ಪುರಾಣದ ನಾರಾಯಣ ಶಾಸ್ತ್ರಿಗಳೆಂದು ಪ್ರಸಿದ್ಧರಾಗಿ ಮಹಾರಾಜರಿಂದ ಮನ್ನಣೆ ಪಡೆದ ವಿದ್ವಾಂಸರ ಒಬ್ಬನೇ ಮಗ. ಸಂಸ್ಕೃತ ಕಲಿತು ಸುಬ್ರಹ್ಮಣ್ಯ ಶಾಸ್ತ್ರಿ ಯಾಗಬೇಕಾಗಿದ್ದವನು ಸಂಗೀತದ ಬೆನ್ನು ಹತ್ತಿ ಸುಬ್ಬಣ್ಣನಾಗಿ ಉಳಿದುದು ಅವನ ಚರಿತ್ರೆಯ ವೈಶಿಷ್ಟ್ಯ. ಚಿಕ್ಕವನಾಗಿದ್ದಾಗಲೇ ಸುಬ್ಬಣ್ಣ ಘೋಷಿಸಿದ ನಿರ್ಣಯ, 'ನಾನು ಪುರಾಣ ಹೇಳೊಲ್ಲ, ಸಂಗೀತ ಹೇಳ್ತೇನೆ'. ಈ ಮಾತು ಅವನ ಜೀವನವನ್ನೇ ಬದಲಾಯಿಸುತ್ತದೆ. ತಂದೆಯಿಂದ ಮಗ, ಮಗನಿಂದ ಮೊಮ್ಮಗ ಹೀಗೆ ಬಾರತೀಯ ಸಮಾಜದಲ್ಲಿ ನಡೆದು ಬಂದ ವೃತ್ತಿ ಸಾತತ್ಯಕ್ಕೆ ಸುಬ್ಬಣ್ಣ ಆಹ್ವಾನ ಕೊಡುತ್ತಾನೆ. ತಾಯಿಯ ಅನಾದರ, ಹೆಂಡತಿಯ ಮೂಕವೇದನೆ, ಪ್ರೀತಿಯ ಮಗನ ತಾತ್ಸಾರ ತಡೆಯಲಾಗದೆ ಹೆಂಡತಿ ಮಕ್ಕಳನ್ನು ತೊರೆದು ಮನೆಬಿಟ್ಟು ಅಲೆಮಾರಿಯಾಗುತ್ತಾನೆ.

ಇದು ಸುಬ್ಬಣ್ಣನ ಬಹಿರಂಗ ಸ್ವರೂಪ. ಆದರೆ ಈ ಕಾದಂಬರಿಯ ನಿಜವಾದ ತಿರುಳು ಅದರ ಅಂತರಂಗದಲ್ಲಿದೆ. ಗಾತ್ರದಲ್ಲಿ ಚಿಕ್ಕದಾದರೂ ಸುಬ್ಬಣ್ಣ ಒಂದು ಸಂಸ್ಕೃತಿಯ ತಿರುಳನ್ನೇ ಹಿಡಿದಿಡುವಲ್ಲಿ ಯಶಸ್ವಿಯಾಗಿದೆ.

ಕಾದಂಬರಿ ಪ್ರಾಮುಖ್ಯವಾಗಿ ಸುಬ್ಬಣ್ಣನ ಕತೆಯಾದರೂ, ಉಳಿದ ಪಾತ್ರಗಳೂ ಜೀವಂತವಾಗಿವೆ. ಲಲಿತೆಯ ಸಹನೆ, ವಿವೇಕ, ಭಕ್ತಿ, ಯಜಮಾನಿಯ ಹಟ, ಪಕ್ಷಪಾತ, ಕಾಠಿಣ್ಯ, ಶಾಸ್ತ್ರಿಗಳ ತೂಕದ ನಡೆತೆ; ಸುಬೇದಾರರ ಜಂಬ, ಇತ್ಯಾದಿ ಗುಣಗಳು ಮೈವೆತ್ತು ಈ ಪಾತ್ರಗಳಲ್ಲಿ ಜೀವಕಳೆ ತುಂಬುತ್ತವೆ.

ಕುವೆಂಪು : ಕಾನೂರು ಹೆಗ್ಗಡತಿಯು ಪರಿಸರದ ಪ್ರತಿ ಸೃಷ್ಟಿಯಲ್ಲಿ ಕುವೆಂಪು ಅವರಿಗೆ ಯಶಸ್ಸನ್ನು ತಂದುಕೊಟ್ಟಿದೆ. ಮುತ್ತಳ್ಳಿ, ಕಾನೂರು, ಸೀತೆಮನೆ, ಕವಕಾನೂರು, ನೆಲ್ಲುಹಳ್ಳಿ ಈ ಪಂಚಗ್ರಾಮಗಳನ್ನು ಕೇಂದ್ರವಾಗಿಟ್ಟುಕೊಂಡು ಒಂದು ಕಾಲದ ಮಲೆನಾಡಿನ ಕೌಟುಂಬಿಕ ಮತ್ತು ಸಾಮಾಜಿಕ ಜೀವನದ ದೊಡ್ಡ ಪ್ರಪಂಚವನ್ನೇ ಕುವೆಂಪು ನಮ್ಮೆದುರು ತೆರೆದಿಟ್ಟಿದ್ದಾರೆ. ಒಕ್ಕಲುತನ, ಬೇಟೆ ಇಲ್ಲಿನ ಜನರ ಮುಖ್ಯ ವ್ಯವಸಾಯಗಳು, ಚಂದ್ರಯ್ಯಗೌಡ, ಶ್ಯಾಮಯ್ಯಗೌಡ, ಸಿಂಗಪ್ಪಗೌಡ, ಅಣ್ಣಯ್ಯಗೌಡ, ಪೆದ್ದೇಗೌಡ ರಂಥ ಪ್ರಮುಖ ಒಕ್ಕಲಿಗರ ಮನೆತನಗಳು, ಅವರ ವ್ಯವಸಾಯಗಳಿಗೆ ಅವಶ್ಯಕರಾದ ಬೇರೆ ಬೇರೆ ಜಾತಿಯ ಆಳುಗಳು, ಇವರೆಲ್ಲರಿಗೂ ಧರ್ಮದರ್ಶಿಗಳಾದ ಅಗ್ರಹಾರದ ಜೋಯಿಸರು ಇಲ್ಲಿನ ಸಾಮಾಜಿಕ ಸ್ತರಗಳನ್ನು ಪ್ರತಿನಿಧಿಸುತ್ತಾರೆ. ಈ ಪರಿಸರದ ಅವಿಭಾಜ್ಯ ಅಂಗಗಳಾದ ಕೆರೆ ಕಾಡುಗಳು, ವನ್ಯ ಮತ್ತು ಪಾಲಿತ ಪಶುಗಳು, ಸಸ್ಯಪ್ರಪಂಚ ಕಾದಂಬರಿಯ ಅಮಾನವೀಯ ಆವರಣದ ಪ್ರತೀಕಗಳು. ಈ ಕಾದಂಬರಿಯಲ್ಲಿ ಬರುವ ನಾಯಿಗಳ ಸಂಖ್ಯೆಯೇ ಲೆಕ್ಕಕ್ಕೆ ಹತ್ತದಷ್ಟಿದೆ. ಮೀನು ಬೇಟೆ, ಕಾಡುಹಂದಿಗಳ ಬೇಟೆ, ಏರಿ ಶಿಕಾರಿ, ಕಳ್ಳು ಕಟ್ಟುವುದು, ಮರ ಕುಯ್ಯುವುದು, ಗದ್ದೆ ಉಳುವುದು, ಇಂಥ ಮಾನವೀಯ ವ್ಯವಹಾರಗಳಲ್ಲಿ ಈ ಪರಿಸರಕ್ಕೆ ಸಹಜವಾದ ಚಟುವಟಿಕೆಗಳು, ದೆಯ್ಯದ ಹರಕೆ, ಕೋಳಿ ಅಂಕ, ಭೂಮಿ ಹುಣ್ಣಿಮೆಯ ಹಬ್ಬ ಮುಂತಾದ ಹರಿದಿನಗಳು, ಜೋಯಿಸರ ಮಂತ್ರ ತಾಯಿತಗಳು, ತೆಂಗಿನ ಕಾಯಿಯ ಮಂತ್ರಶಕ್ತಿ, ಪ್ರಯೋಗ, ಮದುವೆ ಗೃಹ ಪ್ರವೇಶಗಳಂಥ ಉತ್ಸವಗಳು – ಇಂಥ ಸಾಂಸ್ಕೃತಿಕ ವಿವರಗಳು ಕಾದಂಬರಿಯನ್ನು ಓದುವಾಗ ನಾವು ಈ ಪರಿಸರದಲ್ಲಿಯೇ ಜೀವಿಸಿದ್ದಂಥ ಅನುಭವವಾಗುತ್ತದೆ.

ಈ ಪರಿಸರದಲ್ಲಿ ವಾಸಿಸುವ ವ್ಯಕ್ತಿಗಳೆಲ್ಲ ಹೆಚ್ಚಾಗಿ ನೈಸರ್ಗಿಕ ಪ್ರವೃತ್ತಿಗಳನ್ನೇ ಅನುಸರಿಸುವುದು. ಸ್ವಾರ್ಥ ಮತ್ತು ಕಾಮುಕತೆ ಇಲ್ಲಿ ಚಂದ್ರಯ್ಯಗೌಡ, ಸುಬ್ಬಮ್ಮ, ರಂಗಪ್ಪಶೆಟ್ಟಿ, ಗಂಗೆ ಇಂಥ ವ್ಯಕ್ತಿಗಳ ಜೀವನವನ್ನು ನಿಯಂತ್ರಿಸುತ್ತವೆ.

ಓಬಯ್ಯ ಹುಲಿಯ ಬಾಯಿಗೆ ಬೀಳುವುದು, ರಾಮಯ್ಯನ ಹತ್ಯೆ ಇಂಥ ಒಂದೆರಡು ಘಟನೆಗಳನ್ನು ಬಿಟ್ಟರೆ ಉಳಿದ ಎಲ್ಲ ಘಟಣೆಗಳೂ ತೀರ ಸಹಜವಾದವುಗಳು. ಸುಬ್ಬಮ್ಮ ನಾಗಮ್ಮರ ಜಗಳ, ಮುಪ್ಪಿನಲ್ಲಿ ಮದುವೆಯಾದ ಚಂದ್ರಯ್ಯಗೌಡ ಅಣ್ಣಯ್ಯಗೌಡರ ಸಂಕಟಗಳು, ಓಬಯ್ಯನ ಕುಡಿತ, ವೆಂಕಟಜೋಯಿಸರ ಚಾಲಾಕು – ಗ್ರಾಮಜೀವನಕ್ಕೆ ಪರಿಚಿತ ಅಂಶಗಳೇ ಈ ಪರಿಸರದಲ್ಲಿನ ಯಾವ ವಿವರವನ್ನೂ ಕುವೆಂಪುರವರು ಬಿಟ್ಟಿಲ್ಲ. ಕ್ಷುದ್ರವೆಂದು ತೋರಬಹುದಾದ ಜೇಡರ ಬಲೆಯಂಥ ಸೂಕ್ಷ್ಮ ವಿವರಗಳು ಕೂಡ ಕಾದಂಬರಿಯ ನೇಯ್ಗೆಯಲ್ಲಿ ಸೇರಿಕೊಂಡು ಅದಕ್ಕೆ ಅಪೂರ್ವ ಶೋಭೆಯನ್ನುಂಟು ಮಾಡಿವೆ.

ಶಿವರಾಮ ಕಾರಂತರ ಬೆಟ್ಟದ ಜೀವ, ಚೋಮನ ದುಡಿ, 'ಬಾಳು ನನಗೆ ಮುಖ್ಯ' ಬಾಳನ್ನು ತಿಳಿಯಬೇಕಾದ ಸಾಧನೆಗಳೂ ಅಷ್ಟೇ ಮುಖ್ಯ' ಇದು ಶಿವರಾಮ ಕಾರಂತರ ನಂಬಿಕೆಯಲ್ಲೊಂದು. ಕಾರಂತರಿಗೆ ಕಾದಂಬರಿ ಬಾಳನ್ನು ತಿಳಿಯುವ ಮುಖ್ಯ ಸಾಧನವಾಗಿಗೆಯೆನ್ನುವುದು ಅವರ ಯಾವ ಕಾದಂಬರಿಯನ್ನು ಓದಿದರೂ ನಿದರ್ಶನಕ್ಕೆ ಬರುವಂತಿದೆ. ಅವರ ಅತ್ಯಂತ ಯಶಸ್ವೀ ಕೃತಿಗಳಲ್ಲಿ ಒಂದಾದ ಬೆಟ್ಟದ ಜೀವ ಒಂದು ಅತ್ಯುತ್ತಮ ಕಾದಂಬರಿ.

ಬದಲಾಗುತ್ತಿರುವ ತಮ್ಮ ಸಮಾಜದಲ್ಲಿ ಮುಖ್ಯವೆಂದು ಕಂಡುಬಂದ ಎರಡು ಜೀವನ ದೃಷ್ಟಿಗಳನ್ನು ಒಂದರ ಬದಿಗೊಂದು ಅವುಗಳ ಬಲಾಬಲಗಳನ್ನು ಪರೀಕ್ಷಿಸಲು ಕಾರಂತರು ಇಲ್ಲಿ ಪ್ರಯತ್ನಿಸಿದ್ದಾರೆ. ಇದು ಒಂದು ಪ್ರವಾಸ ಕಥನವೆಂದು ತೋರುವ ಬೆಟ್ಟದ ಜೀವಕ್ಕೆ ಗಟ್ಟಿಯಾದ ಸಾಂಸ್ಕೃತಿಕ ಸಂದರ್ಭ ಸಹಜವಾಗಿ ದೊರೆತುಬಿಟ್ಟಿದೆ. ಈ ದೃಷ್ಟಿಯಿಂದ ಕಾದಂಬರಿಯ ಕೇಂದ್ರವ್ಯಕ್ತಿ ಗೋಪಾಲಯ್ಯನಂತೆ ಅವನನ್ನು ಸಂಧಿಸುವ ಶಿವರಾಮಯ್ಯ ಕೂಡ ಮಹತ್ವದ ಪಾತ್ರವಾಗಿದ್ದಾನೆ. ಗ್ರಾಮ ಸಂವೇದನೆಯ, ಗ್ರಾಮ ಮೌಲ್ಯಗಳ ಪ್ರತಿನಿಧಿಯಾಗಿ ಗೋಪಾಲಯ್ಯ ಎದುರಿಗಿದ್ದರೆ, ನಾಗರಿಕ ಪ್ರಜ್ಞೆಯ ಪ್ರತಿನಿಧಿಯಾಗಿ ಶಿವರಾಮ ಕಾದಂಬರಿಯಲ್ಲಿ ಪ್ರವೇಶಿಸುತ್ತಾನೆ. ಶಿವರಾಮಯ್ಯ ನಗರ ವಾಸಿಯಾದರೂ ಅವನ ವೈಯಕ್ತಿಕ ಗುಣಗಳಿಂದಾಗಿ ಗ್ರಾಮಜೀವನವನ್ನು ಅರ್ಥೈಸಿಕೊಳ್ಳಬೇಕಾದ ಶಕ್ತಿ ಅದಕ್ಕೆ ಬೇಕಾದ ಸಹೃದಯತೆ ಅವನಲ್ಲಿವೆ. ಗೋಪಾಲಯ್ಯ, ಶಿವರಾಮಯ್ಯ ಸಂಕೇತಿಸುವ ಸಂವೇದನೆ ಜೀವನದೃಷ್ಟಿಗಳ ಪರಸ್ಪರ ಸಂಬಂಧದಲ್ಲಿಯೇ ಈ ಕತೆಯ ವಸ್ತು ಹುಟ್ಟಿಕೊಳ್ಳುತ್ತದೆ. ಇಲ್ಲಿನ ಮಾನವೀಯ ಸಂಬಂಧಗಳು, ಘಟನೆ ವರ್ಣನೆಗಳು ಈ ವಸ್ತುವಿನ ಅಂಗವಾಗಿಯೇ ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತದೆ.

ಮಿರ್ಜಿ ಅಣ್ಣಾರಾಯರ ನಿಸರ್ಗ ದೇಸೀ ಪರಂಪರೆಯಲ್ಲಿ ಬಂದ ಒಂದು ಉತ್ತಮ ಕಾದಂಬರಿ. ರಂ.ಶ್ರೀ ಮುಗಳಿಯವರು ತಮ್ಮ ಮುನ್ನುಡಿಯಲ್ಲಿ, ಗುರುತಿಸಿದ ಹಾಗೆ ಇಂಗ್ಲೀಷ್ ಸಾಹಿತ್ಯದ ನೇರವಾದ

ಪ್ರೇರಣೆಯಿಲ್ಲದೆ ನಿರ್ಮಿತವಾದ ಕೃತಿ. ನಿಸರ್ಗದ ಕಥಾನಾಯಕ ಓದುವುದು ಆನಂದಕಂದರ ಕಥೆ, ಕಾದಂಬರಿಗಳನ್ನು, ಪಾಶ್ಚಾತ್ಯ ಸಾಹಿತ್ಯದ ಮಹಾನ್ ಕೃತಿಗಳನ್ನಲ್ಲ.

ನಿಸರ್ಗದ ಪ್ರಖರ ವಾಸ್ತವತೆಯನ್ನು ಎಲ್ಲರೂ ಮೆಚ್ಚಿಕೊಂಡಿದ್ದಾರೆ. ಬೆಳಗಾವಿ ಪ್ರಾಂತದ ಚಂದೂರು, ಐನಾಪುರ, ಹಾರೋಗೇರಿ, ತೇರದಾಳ ಗ್ರಾಮಗಳ ಪರಿಸರದಲ್ಲಿನ ಜೈನ ಸಮಾಜವನ್ನು ಆಶ್ಚರ್ಯಕರವಾದ ವಿವರಗಳೊಂದಿಗೆ ಜೀವಂತ ಬಾಷೆಯಲ್ಲಿ ಪ್ರತಿಸೃಷ್ಟಿಸುವ ಮೂಲಕ ಅಣ್ಣಾರಾಯರು ತಮ್ಮ ಕಾಲದಲ್ಲಿ, ಆಗಲೇ ರೂಢಿಯಾಗಿದ್ದ ವಾಸ್ತವ ಮಾರ್ಗವನ್ನೇ ಆರಿಸಿಕೊಂಡರು. ಆದರೆ ಅವರ ಕಾದಂಬರಿಯಲ್ಲಿ ಕಾವ್ಯದ ಪ್ರವಾಹವೂ ಇರುವುದು ಅದರ ವೈಶಿಷ್ಟ್ಯ. ನಿಸರ್ಗದ ಕೇಂದ್ರವ್ಯಕ್ತಿಗಳಾದ ತಾರಾ ಅನಂತರ ಪ್ರೀತಿ, ಅನುರಾಗ, ಪ್ರಣಯ, ದು:ಖ ದುರಂತರಗಳ ಕ್ರಿಯೆ ಈ ಕಾದಂಬರಿಗೆ ಅಂತರಂಗವನ್ನು ಒದಗಿಸಿದೆ.

ಪ್ರಗತಿಶೀಲ ಸಾಹಿತ್ಯವಾದ ಬರವಣಿಗೆಯ ಬಹುಮುಖ್ಯ ಲಕ್ಷಣವೆಂದರೆ ರೋಷ, ಕೆಚ್ಚು, ಆವೇಶ, ಸಾಹಿತ್ಯದಲ್ಲಿ ಬರೆಯಲಾಗದ ಹಲವಾರು ವಿಷಯಗಳನ್ನು ಕುರಿತು ಪ್ರಗತಿಶೀಲರು ನಿರ್ಭಿಡತೆ ಇಲ್ಲದೆ ಬರೆದರು. ಲೈಂಗಿಕ ದೌರ್ಜನ್ಯ, ಶೋಷಣೆ, ಧಾರ್ಮಿಕ ಕೇಂದ್ರಗಳಲ್ಲಿ ನಡೆಯುವ ಮೋಸ, ಭ್ರಷ್ಟಾಚಾರ, ಬೂಟಾಟಿಕೆ, ಮಠ ಮಾನ್ಯಗಳಲ್ಲಿ ನಡೆಯುವ ಅನೈತಿಕತೆ ಇಂಥದ್ದನ್ನೆಲ್ಲಾ ಪ್ರಗತಿಶೀಲರು ಬರವಣಿಗೆಯ ಮೂಲಕ ಬರೆದರು. ಅನಕೃ ಅವರ 'ನಗ್ನಸತ್ಯ', 'ಶನಿಸಂತಾನ', 'ಸಂಜೆಗತ್ತಲು', 'ಕಬ್ಬಿಣದ ಕಾಗೆ', ತರಾಸು ಅವರ 'ಮುಂಜಾವಿನಿಂದ ಮುಂಜಾವು', 'ಮಸಣದ ಹೂ', ಕಟ್ಟೀಮನಿಯವರ 'ಮೋಹದ ಬಲೆಯಲ್ಲಿ', 'ಜರತಾರಿ ಜಗದ್ಗುರು', 'ಜ್ವಾಲಾಮುಖಿಯ ಮೇಲೆ' ಇನ್ನೂ ಮೊದಲಾದ ಪ್ರಮುಖ ಕಾದಂಬರಿಗಳಲ್ಲಿ ಜೀವನದ ಅನೇಕ ನಗ್ನ ಸತ್ಯಗಳನ್ನು ಬಯಲಿಗೆ ತಂದವು. ಚದುರಂಗರ 'ಸರ್ವಮಂಗಳಾ' 'ಉಯ್ಯಾಲೆ',. 'ವೈಶಾಖ', ಮತ್ತು ಹೆಜ್ಜಾಲಗಳೆಂಬ ಕೃತಿಗಳು ಈ ಕಾಲದಲ್ಲಿ ಜನಮನ್ನಣೆ ಪಡೆದವು.

ಅ.ನ.ಕೃ. ಲಭ್ಯವಿದ್ದ ಎಲ್ಲ ಸಾಹಿತ್ಯ ಪ್ರಕಾರಗಳನ್ನು ಉಪಯೋಗಿಸಿಕೊಂಡಿದ್ದಾರೆ. ಅ.ನ.ಕೃ ವ್ಯಕ್ತಿತ್ವದ ವಿಶೇಷ ಲಕ್ಷಣವೆಂದರೆ ಮಾನವತಾವಾದಿಯಲ್ಲಿ ಅವರಿಗಿದ್ದ ಶ್ರದ್ಧೆ, ಸಂಸ್ಕೃತಿಯನ್ನು ಉಳಿಸಿ ಬೆಳೆಸುವುದು ಕಾದಂಬರಿಕಾರನ ಹೊಣೆಯೆಂದು ಅರಿತಿದ್ದ ಅ.ನ.ಕೃ. ತಮ್ಮ ಪ್ರಕೃತಿಯಲ್ಲಿ ಆದರ್ಶವಾದೀ ಮತ್ತು ಸಮಾಜವಾದೀ ಪ್ರವೃತ್ತಿಗಳಲ್ಲಿ ಸಮತೋಲನವನ್ನು ಸಾಧಿಸಲು ಪ್ರಯತ್ನಿಸಿದವರು.

ಕಾದಂಬರಿಗೆ ಅ.ನ.ಕೃ. ಸಲ್ಲಿಸಿದ ಅತಿ ಮಹತ್ವದ ಸೇವೆ ಎಂದರೆ ಅದರ ಕ್ಷೇತ್ರವನ್ನು ವಿಸ್ತಾರಗೊಳಿಸಿದ್ದು, ವಸ್ತು ವೈವಿಧ್ಯ ಅವರ ಕಾದಂಬರಿಗಳ ಸಾಧನೆ. ಸಾಂಪ್ರದಾಯಿಕ ಮೌಲ್ಯಗಳ ಮೇಲೆ ನಿಂತ ಸಾವಯುವ ಸಮಾಜ ಮತ್ತು ಆಧುನಿಕ ಒತ್ತಡಗಳಿಂದ ಅದರ ವಿಘಟನೆ, ಕುಟುಂಬದ

ಶಿಥಿಲೀಕರಣ, ಲೈಂಗಿಕತೆ, ವಿವಾಹ, ಕಲಾವಿದ ಮತ್ತು ಅವನ ಜಗತ್ತು, ವೈಶ್ಯಾವೃತ್ತಿಯಂಥ ಸಾಮಾಜಿಕ ಅನ್ಯಾಯಗಳು ಮತ್ತು ಮೌಲ್ಯಗಳ ನಾಶ ನಾನಾ ಸಂಗತಿಗಳ ಬಗ್ಗೆ ತಮ್ಮ ಸಮಾಜವಾದಿ ನಿಲುವನ್ನು ಪ್ರತಿಪಾದಿಸಿದ್ದಾರೆ.

ಅ.ನ.ಕೃ. ಅವರು ಕನ್ನಡ ಕಾದಂಬರಿ ಸಾರ್ವಭೌಮರೆಂದು ಪ್ರಸಿದ್ಧರಾಗಿದ್ದಾರೆ. ಅ.ನ.ಕೃ. ಅವರ ಉದಯರಾಗ [೧೯೩೪] ಪ್ರಾರಂಭವಾದ ಕಾದಂಬರಿಗಳ ಮಾಲಿಕೆಯಲ್ಲಿ ಅವರು ಕಲಾವಿದರ ಜೀವನದ ಅನೇಕ ಮುಖಗಳನ್ನು, ಆತ ಸಮಾಜದೊಂದಿಗೆ ಹೊಂದಿದ ಸಂಕೀರ್ಣ ಸಂಬಂಧ, ಕಲೆಯ ಸಾಧನೆಯಲ್ಲಿ ಆತನ ಸೋಲು-ಗೆಲವು ಇತ್ಯಾದಿಗಳನ್ನು ಚಿತ್ರಿಸಿದ್ದಾರೆ.

ಅ.ನ.ಕೃ. ಅವರ ಮೊದಲ ಕಾದಂಬರಿ 'ಜೀವನ ಯಾತ್ರೆ' ಯಲ್ಲಿ ಕಾಮದ ಚಿತ್ರಣವನ್ನು ಚಿತ್ರಿಸಿದ್ದಾರೆ. 'ನಗ್ನಸತ್ಯ', 'ಶನಿಸಂತಾನ', 'ಸಂಜೆಗತ್ತಲು', 'ಅಪರಂಜಿ', 'ಕಬ್ಬಿಣದ ಕಾಗೆ', ಮೊದಲಾದ ಕಾದಂಬರಿಗಳಲ್ಲಿ ವೇಶ್ಯಾಸಮಸ್ಯೆ, ಕಾಮದ ಸಮಸ್ಯೆಗಳನ್ನು ವಸ್ತುವಾಗಿ ಆರಿಸಿಕೊಂಡರು.

ಸಂಧ್ಯಾರಾಗ ಕೇವಲ ಒಬ್ಬ ಕಲಾವಿದ ತನ್ನ ಪರಿಸರದೊಡನೆ ಹೋರಾಡುವ ಕಾದಂಬರಿಯಲ್ಲಿ. ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯಂತೆ ಸಮಾಜ ದಲ್ಲಿ ಬೇರುಬಿಟ್ಟ ಕೌಟುಂಬಿಕ ಜೀವನ ಆಧುನಿಕ ಜೀವನ ಒತ್ತಡಗಳಿಗೆ ಸಿಕ್ಕಿ ಉಧ್ವಸ್ತವಾದ ಪ್ರಕ್ರಿಯೆಯನ್ನು ಕುರಿತಾದ ಕಾದಂಬರಿ.

ಈ ಕಾದಂಬರಿಯಲ್ಲಿ ಹಳ್ಳಿಯ ಜೀವನವೆಂದರೆ ಅತ್ಯಂತ ಸುಸಂಬದ್ಧವಾದ, ಸಂಪನ್ನವಾದ, ಸರಂಜಾಮೀ ಚೌಕಟ್ಟಿನಲ್ಲಿ ಸ್ಥಿರವಾದ ಜೀವನ, ಆದರೆ ಈ ಶತಮಾನದಲ್ಲಿ ಹಲವಾರು ಕಾರಣಗಳ ಮೂಲಕ ಶಿಕ್ಷಣ, ಔದ್ಯೋಗೀಕರಣ ಇತ್ಯಾದಿಗಳ ಮೂಲಕ ಸಮಾಜ ಜೀವನ ವೇಗದಿಂದ ಬದಲಾಗುತ್ತಿದೆ. ನಗರಗಳಲ್ಲಿ ಪಾರಂಪರಿಕವಾದ ಹಳ್ಳಿಯ ಮೌಲ್ಯಗಳು ನಡೆಯುವುದಿಲ್ಲ. ನಗರದ ಮುಖ್ಯ ಮೌಲ್ಯಗಳು, ಸ್ಪರ್ಧೆ ಹಾಗೂ ಸಂಪಾದನೆ, ನಾ ಮುಂದೆ ನೀ ಮುಂದೆ ಎಂದು ಹಣ ಪ್ರತಿಷ್ಠೆಗಳಿಗಾಗಿ ಪೈಪೋಟಿ, ನಗರದ ಆತ್ಮಕೇಂದ್ರಿತ ಜೀವನ ಮನುಷ್ಯನನ್ನು ವಿಕೃತ ಗೊಳಿಸುತ್ತದೆ. ಸಂಧ್ಯಾರಾಗದ ರಾಮ ನಗರಜೀವನದ ಪ್ರಭಾವಕ್ಕೆ ಸಿಲುಕಿ, ತನ್ನ ಮಾನವತೆಯನ್ನೇ ಕಳೆದುಕೊಳ್ಳುತ್ತಾನೆ. ಹೃದಯಹೀನವಾಗಿ ಎಲ್ಲರ ಮೇಲೆ ಸಿಟ್ಟಿಗೇಳುತ್ತ ಬರೇ ತನ್ನ ಸ್ವಾರ್ಥ ಸಾಧನೆಗಾಗಿಯೇ, ದುಡಿಯುತ್ತಾನೆ, ಕ್ರೂರತನದಿಂದ ಹೆಂಡತಿಯನ್ನು ಜರೆಯುತ್ತಾನೆ. ಅಪ್ರತ್ಯಕ್ಷವಾಗಿ ಲಕ್ಷ್ಮಣನ ಹೆಂಡತಿ ಜಯಾಳ ಮೃತ್ಯುವಿಗೆ ಕಾರಣನಾಗುತ್ತಾನೆ. ಸಂಧ್ಯಾರಾಗದ ನಾಯಕನೂ ದುರ್ಬಲನೇ. ಸಂಧ್ಯಾರಾಗದ ಲಕ್ಷ್ಮಣನಿಗೆ ಸಂಗೀತವೇ ಆದರ್ಶ. ಇಬ್ಬರೂ ಈ ವ್ಯವಹಾರಿಕ ಜಗತ್ತಿನಿಂದ ದೂರವಿದ್ದವರು. ಇಬ್ಬರೂ ಅತ್ಯಂತ ಒಳ್ಳೆಯವರು. ಬೆಣ್ಣೆಯಂತಹ ಮೃದು ಸ್ವಭಾವ ಉಳ್ಳವರು – ತಾಯಿ ಹೃದಯದ ಹೆಂಗಳೆಯರಿಂದ, ಭ್ರಾತೃಹೃದಯದ

ಸ್ನೇಹಿತರಿಂದ ಯಾವಾಗಲೂ ಪ್ರೀತಿಸಿಕೊಳ್ಳುವಂಥವರು. ಈ ಕಾದಂಬರಿಯಲ್ಲಿ ಖಳನಾಯಕನ ಕೆಲಸವನ್ನು ಸಮಾಜ ವ್ಯವಸ್ಥೆಯೇ ಮಾಡಿಸುತ್ತದೆ.

ಚದುರಂಗರ ಮೂರು ಕಾದಂಬರಿಗಳು: ಸರ್ವಮಂಗಳಾ, ಉಯ್ಯಾಲೆ, ವೈಶಾಖ ಮೂರು ಕಾಲ ಘಟ್ಟಗಳನ್ನು ಮೈಗೂಡಿಸಿಕೊಂಡು ಬಂದ ಕೃತಿಗಳು. ೧೯೬೦ರಲ್ಲಿ ಉಯ್ಯಾಲೆ ಪ್ರಗತಿಶೀಲ ಮನೋವೃತ್ತಿಯಿಂದ ಹೊರಬಂದ ಕೃತಿ, ಈ ಕಾದಂಬರಿಯು ಪ್ರೇಮದ ಕತೆಯಾದರೂ ಸರ್ವಮಂಗಳದ ಹರಹು ಇಲ್ಲಿಲ್ಲ. ಸಾಮಾಜಿಕ ಆವರಣ ಸಂಕುಚಿತವಾಗಿ ಕಾದಂಬರಿಕಾರನ ಲಕ್ಷ್ಯವೆಲ್ಲ ಕಥೆಯ ನಾಯಕ-ನಾಯಿಕೆಯರಲ್ಲಿ ಕೇಂದ್ರಿತವಾಗಿದೆ. ಪ್ರಗತಿಶೀಲದ ಕತೆ-ಕಾದಂಬರಿಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುವ ವಿವಾಹ ಮತ್ತು ಪ್ರೇಮಗಳ ವಿರೋಧ ಉಯ್ಯಾಲೆಯ ಮುಖ್ಯ ವಸ್ತು. ಈ ಕಾದಂಬರಿಯ ಕೇಂದ್ರವ್ಯಕ್ತಿಯಾದ ರಾಧಾ ಜೀವನಕ್ಕೆ ತನ್ನನ್ನು ಸಂಪೂರ್ಣವಾಗಿ ತೆರೆದುಕೊಂಡವಳು. ಪರಿಸ್ಥಿತಿಯ ಒತ್ತಡದಿಂದಾಗಿ ತನಗೆ ಯಾವ ವಿಧದಲ್ಲಿಯೂ ಅನುರೂಪನಲ್ಲದೆ ಶೇಷಗಿರಿಯನ್ನು ಮದುವೆಯಾಗುತ್ತಾಳೆ. ಆತನಿಗೆ ಓದು ಶಿಕ್ಷಕ ವೃತ್ತಿಗಳನ್ನು ಬಿಟ್ಟರೆ ಬೇರೆ ಆಸ್ಥೆಗಳೇ ಇಲ್ಲ. ಇದರಿಂದ, ರಾಧೆ ವಿಪರೀತವಾದ ಏಕಾಂಗಿತನಕ್ಕೆ ಒಳಗಾಗುತ್ತಾಳೆ. ಅವಳಿಗಿರುವ ಸಂತೋಷವೆಂದರೆ ಮಗಳು ಪ್ರಭಾವತಿಯೊಬ್ಬಳೇ . ಇಂಥ ಒಂದು ಸನ್ನಿವೇಶದಲ್ಲಿ ಕೃಷ್ಣೇಗೌಡನ ಆಗಮನವಾಗುತ್ತದೆ. ಕೃಷ್ಣೇಗೌಡನ ವ್ಯಕ್ತಿತ್ವ ಶೇಷಗಿರಿಯ ವ್ಯಕ್ತಿತ್ವಕ್ಕಿಂತ ತೀರ ಭಿನ್ನವಾದುದು. ಆತ ಸ್ನೇಹನಮಯಿ, ರಸಿಕ, ಕಲಾ ಪ್ರಜ್ಞೆಯುಳ್ಳವ. ಸಹಜವಾಗಿಯೇ ರಾಧೆ ಅವನತ್ತ ಆಕರ್ಷಿತಳಾಗುತ್ತಾಳೆ. ಪ್ರಭಾವತಿಯಲ್ಲಿ ಕೃಷ್ಣೇಗೌಡ ತೋರುವ ವಾತ್ಸಲ್ಯ ಅವರಿಬ್ಬರನ್ನು ಮತ್ತಷ್ಟು ಸಮೀಪಕ್ಕೆ ಎಳೆಯುತ್ತದೆ. ಆದರೆ ಶೇಷಗಿರಿಯು ಅವರಲ್ಲಿಟ್ಟ ವಿಶ್ವಾಸ, ಸ್ವಂತದ ನೈತಿಕ ಪ್ರಜ್ಞೆ, ಸಮಾಜದ ಭೀತಿ ಅವರಲ್ಲಿ ಅಪರಾಧದ ಭಾವನೆಯನ್ನು ಬಲಗೊಳಿಸಿ ಗೊಂದಲಕ್ಕೆ ಕಾರಣವಾಗುತ್ತದೆ. ಉಯ್ಯಾಲೆ ಅವರ ಮನಸ್ಸಿನ ಹೊಯ್ದಾಟಕ್ಕೆ ಪ್ರತೀಕವಾಗುತ್ತದೆ.

ಉಯ್ಯಾಲೆ ವಾಸ್ತವದೊಡನೆ ನಿಕಟವಾದ ಸಂಬಂಧವನ್ನಿಟ್ಟುಕೊಂಡ ಕೃತಿ. ಕಾದಂಬರಿಯ ಮುಖ್ಯ ಸನ್ನಿವೇಶವಾದ ಶೇಷಗಿರಿ-ರಾಧೆಯರ ಪ್ರೇಮರಹಿತ ವೈವಾಹಿಕ ಜೀವನ, ರಾಧೇ-ಕೃಷ್ಣೆಗೌಡರ ಪರಸ್ಪರ ಆಕರ್ಷಣೆ, ಅವರ ಮಾನಸಿಕ ಹೊಯ್ದಾಟ, ಸೋಲು ಗೆಲುವುಗಳು ಯಥಾವತ್ತಾಗಿಯೇ ಚಿತ್ರಿತವಾಗಿವೆ. ಹೀಗಿದ್ದರೂ ಉಯ್ಯಾಲೆ ತನ್ನ ಆಂತರಿಕ ಸ್ವರೂಪದಲ್ಲಿ ನವ್ಯ ಕಾದಂಬರಿಯತ್ತ ಒಲಿಯುವುದು ಚದುರಂಗರ ಕಾದಂಬರಿ ಕಲೆಯ ವಿಕಾಸದ ಸಂದರ್ಭದಲ್ಲಿ ಲಕ್ಷಿಸತಕ್ಕ ವಿಷಯವಾಗಿದೆ. ಕಾದಂಬರಿಯಲ್ಲಿನ ಭಾಷೆಯ ಬದಲಾವಣೆಯೂ ಮುಖ್ಯವಾದ ಅಂಶ. ಉಯ್ಯಾಲೆಯ ಆಂತರಿಕ ವಿಶ್ಲೇಷಣೆಗೆ ಪ್ರೌಢ ಗ್ರಾಂಥಿಕ ಭಾಷೆಯೇ ಬೇಕಾಗುತ್ತದೆ. ಆದರೆ, ಈ ಭಾಷೆಗೆ ಸೂಕ್ಷ್ಮತೆಯಿಲ್ಲದ್ದರಿಂದ

ಉಯ್ಯಾಲೆಯ ಒಟ್ಟು ದರ್ಶನವೂ ಸೂಕ್ಷ್ಮವಾಗಿ ಮೂಡಿಬಂದಿದೆ. ಇದಲ್ಲದೆ ಪ್ರಗತಿಶೀಲ ಮನೋವೃತ್ತಿಗೆ ಹೊಂದಿಕೊಂಡ ಒಂದು ಬಿಚ್ಚು ತಾತ್ವಿಕತೆಯೂ ಇಲ್ಲಿ ಮೇಲೆಂದ ಮೇಲೆ ಹಣಕಿ ಹಾಕುವುದರಿಂದ ಕಾದಂಬರಿಯ ತನ್ಮಯತೆಗೂ ಬಾಧೆಯುಂಟಾಗಿದೆ.

ತ.ರಾ. ಸುಬ್ಬರಾವ್, ಬಸವರಾಜ್ ಕಟ್ಟೀಮನಿ, ನಿರಂಜನ, ಅರ್ಚಕ ವೆಂಕಟೇಶ, ನಾಡಿಗೇರ ಕೃಷ್ಣರಾವ್ ಇನ್ನೂ ಮುಂತಾದವರು ಪ್ರಗತಿಶೀಲ ಮಾರ್ಗದಲ್ಲಿ ಬರೆದವರು. ಇವರಲ್ಲಿ ಕಟ್ಟೀಮನಿಯವರಂತೆ ಕೆಲವರು ಚಳುವಳಿಯಿಂದ ಸ್ವಲ್ಪದೂರ ನಿಂತು ಬರೆದರೂ ಪ್ರಗತಿಶೀಲ ಧ್ಯೇಯಗಳಿಗೆ ಅನುಗುಣವಾಗಿ ಬರೆದವರು. ಐತಿಹಾಸಿಕ, ಪೌರಾಣಿಕ ಅಲ್ಲದ ಕಾದಂಬರಿಗಳೆಲ್ಲ ಸಾಮಾಜಿಕ ಎಂಬ ಹೆಸರಿನಿಂದ ಮೆರೆಯುತ್ತಿದ್ದ ಕಾಲದಲ್ಲಿ ನಿಜವಾಗಿ 'ಸಾಮಾಜಿಕ ಕಾದಂಬರಿ' ಗಳೆನ್ನಿಸಿಕೊಳ್ಳುವ ಕೆಲವು ಕೃತಿಗಳನ್ನು ಬರೆದರು. ಕಾದಂಬರಿಯಲ್ಲಿ ಕಂಡ ಸಮಸ್ಯೆಗಳು ಯಾವುದಾದರೊಂದು ರೀತಿಯಲ್ಲಿ ಸುಖವಾಗಿ ಅಥವಾ ದು:ಖದಲ್ಲಿ ಪರಿಹಾರ ಕಾಣಬೇಕು ಎಂಬ ಭಾವನೆಯನ್ನು ಬಿಟ್ಟುಕೊಟ್ಟವರು. ಜೀವನ ಆದಿ – ಮಧ್ಯೆ ಎಂಬ ಅಂತ್ಯವಿಲ್ಲದ ಪ್ರವಾಹ, ಕಾದಂಬರಿ ಅದನ್ನು ಪ್ರತಿಬಿಂಬಿಸಿದರೆ ಸಾಕು ಎಂಬ ದೃಷ್ಟಿಯಿಂದ ಬರೆದರು.

ತ.ರಾ.ಸು. ಅವರದು ಚಿತ್ರಮಯವಾದ ಭಾಷೆ. ಕಣ್ಣಿಗೆ ಕಟ್ಟುವಂತೆ ನೋಟವನ್ನಾಗಲಿ ವ್ಯಕ್ತಿಗಳನ್ನಾಗಲಿ ಅವರು ವರ್ಣಿಸಬಲ್ಲರು. ಅವರ ಪ್ರಾರಂಭದ ಕಾದಂಬರಿಗಳಲ್ಲಿ ಆವೇಶ ಹೆಚ್ಚು. ಬರಹಕ್ಕೆ ಸಕ್ಕರೆ ಅಂಟಿದಂತೆ ಭಾವುಕತೆ ಅಂಟುತ್ತದೆ. ಅವರ ಪ್ರಾರಂಭವಾದ ಕಾದಂಬರಿಗಳಲ್ಲಿ ಒಂದಾದ 'ಮುಂಜಾವಿನಿಂದ ಮುಂಜಾವು' ತೋರಿಸುವ ಹಾಗೆ, ಒಂದು ಜೀವನ ವಿಧಾನವನ್ನು ಇವರು ಜೀವಂತವಾಗಿ ನಿರೂಪಿಸಬಲ್ಲರು. ಸಣ್ಣ ಅಂಗಡಿಯ ಮಾಲೀಕ, ಕೂಲಿಯವನು, ಅಚ್ಚುಕೂಟದ ಕೆಲಸಗಾರ, ಪತ್ರಿಕೋದ್ಯಮಿ ಯಾರ ಬಾಳನ್ನಾದರೂ ಕಣ್ಣಿಗೆ ಕಟ್ಟುವಂತೆ ಚಿತ್ರಿಸಬಲ್ಲರು.

೧೯೬೧ ರಲ್ಲಿ ಪ್ರಕಟವಾದ ಶಾಂತಿನಾಥ ದೇಸಾಯಿಯವರ ಮುಕ್ತಿಯೊಡನೆ ಕನ್ನಡ ಕಾದಂಬರಿಯು ನವ್ಯಮಾರ್ಗದತ್ತ ತಿರುಗಿತು. ನವ್ಯ ಕಾದಂಬರಿಯ ಗುರಿ ಕೂಡ ವಾಸ್ತವತೆಯ. ಆದರೆ, ವಾಸ್ತವತೆಯೇ ಅದು ಕೊಡುವ ವ್ಯಾಖ್ಯೆ ಮಾತ್ರ ಬೇರೆಯಾಗಿದೆ. ವಾಸ್ತವತೆಯ ಅಸ್ತಿತ್ವ ಬಾಹ್ಯ ಜಗತ್ತಿನಲ್ಲಿರದೆ ಮನುಷ್ಯನ ಪ್ರಜ್ಞೆಯಲ್ಲಿದೆ ಎಂಬ ವರ್ಜೀನಿಯಾ ವುಲ್ಫಳ ಹೇಳಿಕೆ ವಾಸ್ತವ ಮಾರ್ಗದ ಕಾದಂಬರಿ ಮತ್ತು ನವ್ಯ ಮಾರ್ಗದ ಕಾದಂಬರಿ ಇವುಗಳ ನಡುವಿನ ಅಂತರವನ್ನು ತಿಳಿಯುವುದಕ್ಕೆ ಸಹಾಯ ನೀಡುತ್ತದೆ. ಮುಕ್ತಿಯಲ್ಲಿ ಗೌರೀಶನ ಮನಸ್ಸಿನ ವ್ಯಾಪಾರಗಳೇ ಮುಖ್ಯ ವಸ್ತು. ಅವನ ಕಾಳಜಿಗಳಿಗೆ ಹೊರತಾದ ಬಾಹ್ಯ ಜಗತ್ತು ನಮ್ಮ ಅನುಭವಕ್ಕೆ ಸಿಕ್ಕುವುದೇ ಇಲ್ಲ. ಈ ಬದಲಾವಣೆಗೆ ತಾತ್ವಿಕ

ಹಿನ್ನೆಲೆ ಪಶ್ಚಿಮದಿಂದಲೇ ಬಂದುದು. ಅದೆಂದರೆ ಹೈಡೆಗರ್ ಪ್ರತಿ ಪಾದಿಸುವ ಮಾನವನ ಮೂಲಭೂತ ಏಕಾಕಿತನ; ಮಾನವ ತನ್ನ ಹೊರಗಿನ ವಸ್ತುಗಳೊಡನೆ ಅಥವಾ ವ್ಯಕ್ತಿಗಳೊಡನೆ ನಿಜವಾದ ಸಂಬಂಧ ಬೆಳೆಸಿಕೊಳ್ಳಲಾರ. ಅವನ ಅಸತ್ತಿತ್ವದ ಮೂಲವನ್ನಾಗಲಿ, ಗುರಿಯನ್ನಾಗಲಿ, ನಿರ್ಧರಿಸುವುದು ಅಸಾಧ್ಯ. ನವ್ಯ ಕಾದಂಬರಿಯ ಸಾಮಾಜಿಕ ಹಿನ್ನೆಲೆಯನ್ನು ನಾವು ಗುರುತಿಸಬೇಕು.

ಬಂಡವಾಳವಾದೀ ವ್ಯವಸ್ಥೆಯಲ್ಲಿ ವ್ಯಕ್ತಿಯ ಸ್ವಾಸ್ಥ್ಯವನ್ನು ಸಂಕಟಕ್ಕೆ ಗುರಿಪಡಿಸುವ ರಾಜಕೀಯ, ಸಾಮಾಜಿಕ, ಶಕ್ತಿಗಳ ನಿಗೂಢತೆ, ಭಯಾನಕತೆ, ಲಂಕೇಶರ ಬಿರುಕು, ಗಿರಿಯವರ 'ಗತಿಸ್ಥಿತಿ' ಮತ್ತು ತೇಜಸ್ವಿಯವರ 'ಕರ್ವಾಲೊ, ಚಿದಂಬರ ರಹಸ್ಯ  ಕಾದಂಬರಿಗಳ ಮುಖ್ಯ ವಸ್ತುವಾಗಿದೆ.

ನವ್ಯ ಕಾದಂಬರಿಗಳ ಅಂತಃ ಸ್ವರೂಪಕ್ಕೂ ಅವುಗಳ ಮೌಲ್ಯಪ್ರಜ್ಞೆಗೂ ನಿಕಟವಾದ ಸಂಬಂಧವಿದೆ. ಆತ್ಮನಿಷ್ಠರಾದ ನವ್ಯ ಕಾದಂಬರಿಕಾರರು ಸಂಸ್ಕೃತಿ ಜನ್ಯ ಮೌಲ್ಯಗಳನ್ನು ಇದ್ದಕ್ಕಿದ್ದಂತೆ ಒಪ್ಪಿಕೊಳ್ಳುವುದಿಲ್ಲ.

೧೯೩೧ ರಲ್ಲಿ ದೇವುಡುರವರ ಅಂತರಂಗಕ್ಕೆ ಹೋಲಿಸಿ ನೋಡಿದಾಗ, ಅಂತರಂಗ ಪ್ರತಿಪಾದಿಸಿದ ಸ್ವಸಂಸ್ಕೃತಿ ಜನ್ಯ ಮೌಲ್ಯಗಳಾದ ತ್ಯಾಗ, ಶ್ರೇಯಸ್ಸಿನ ಹಂಬಲ ಮತ್ತು ಸಂಸ್ಕಾರ ಪ್ರಸ್ತಾಪಿಸಬಯಸುವ ಅಸ್ತಿತ್ವವಾದೀ ಮೌಲ್ಯಗಳ ಅಂತರ ಎದ್ದುಕಾಣುತ್ತದೆ.

ನವ್ಯ ಕಾದಂಬರಿಕಾರರ ಅತಿಯಾದ ಆತ್ಮನಿಷ್ಠತೆ, ಬರವಣಿಗೆಯ ಹೊಸ ವಿಧಾನಗಳಿಂದ ಹುಟ್ಟಿದ ಕ್ಲಿಷ್ಟತೆ, ಪಾಶ್ಚಾತ್ಯ ಪ್ರೇರಣೆಗಳಿಂದ ದೊರಕಿಸಿಕೊಂಡ ಮೌಲ್ಯ ವ್ಯವಸ್ಥೆ, ಇವುಗಳಿಂದ ಈ ಲೇಖಕರಿಗೂ ಸಾಮಾನ್ಯ ಓದುಗರಿಗೂ ನಡುವೆ ಒಂದು ಕಂದರವೇ ಏರ್ಪಟ್ಟಿತು. ನವ್ಯ ಕಾದಂಬರಿಕಾರರೆಲ್ಲ ಸಮಾಜದಿಂದ ವಿಮುಖರಾಗಿರಲಿಲ್ಲ. ಸಂಸ್ಕಾರ, ಬಿರುಕು, ಮೂರು ದಾರಿಗಳು ಇಂಥ ಕಾದಂಬರಿಗಳ ಸಾಮಾಜಿಕ ಪ್ರಜ್ಞೆ ಪ್ರಖರವಾಗಿಯೇ ಇದೆ. ಆದರೆ ಈ ಕಾದಂಬರಿಗಳ ಕ್ರಿಯೆ ವ್ಯಕ್ತಿನಿಷ್ಠವಾದುದರಿಂದ ಸಾಮಾಜಿಕ ಪ್ರಕ್ರಿಯೆಯನ್ನು ಇಡಿಯಾಗಿ ತಿಳಿದುಕೊಳ್ಳುವ ಮಹತ್ವಕಾಂಕ್ಷೆ ಅವುಗಳಿಗಿಲ್ಲ. ನವ್ಯ ಮಾರ್ಗದ ಹೊರಗೆ ಉಳಿದರೂ ನಮ್ಮ ಮಹತ್ವದ ಲೇಖಕರಲ್ಲೊಬ್ಬರಾದ ಎಸ್.ಎಲ್.ಬೈರಪ್ಪನವರಲ್ಲಿ ಸಮಕಾಲೀನ ಸಾಮಾಜಿಕ ಪ್ರಕ್ರಿಯೆಯನ್ನು ನಮ್ಮ ಸಂಸ್ಕೃತಿಯ ಒಳಗಿದ್ದುಕೊಂಡೇ ಅರ್ಥವಿಸುವ ತಾತ್ವಿಕ ಸಾಮರ್ಥ್ಯವಿದೆ. ಭೈರಪ್ಪನವರ ಕಲಾ ಪ್ರಜ್ಞೆಯ ದೌರ್ಬಲ್ಯಗಳಿಂದಾಗಿ ಮಾರ್ಗ ಪ್ರವರ್ತಕ ಕೃತಿಗಳನ್ನು ಕೊಡುವುದು ಅವರಿಂದ ಸಾಧ್ಯವಾಗಿಲ್ಲ.

ನವ್ಯ ಕಾದಂಬರಿಯ ಅತಿ ಮುಖ್ಯ ಲಕ್ಷಣಗಳೆಂದರೆ ಪರಕೀಯ ಪ್ರಜ್ಞೆ, ಏಕಾಂಗಿತನ, ನಿರರ್ಥಕತೆ ಎಂದು ತ.ಸು. ಶಾಮರಾಯರು ಗುರುತಿಸಿದ್ದಾರೆ. ಅಂದರೆ ಬದುಕು ಅರ್ಥಪೂರ್ಣ ಎನ್ನುವ ಹಿಂದಿನ

ಸಾಹಿತ್ಯಗಳ ದೃಷ್ಟಿಯನ್ನೇ ಅನುಮಾನದಿಂದ ನೋಡಲು ಆರಂಭಿಸಿದ ನವ್ಯರು ಪರಂಪರಾನುಗತ ನಂಬಿಕೆ ಮೌಲ್ಯಗಳನ್ನೆಲ್ಲಾ ಪ್ರಶ್ನಿಸುತ್ತಾ ಅವುಗಳ ಟೊಳ್ಳುತನವನ್ನು ಬಯಲು ಮಾಡಿ ಪಣತೊಟ್ಟವರಂತೆ ಬರೆಯ ತೊಡಗಿದರು. ವಿವಿಧ, ಒತ್ತಡಗಳಿಂದ ವರ್ತಮಾನದಲ್ಲಿ ಬದುಕುತ್ತಿರುವ ವ್ಯಕ್ತಿಯ ಅಸ್ವಸ್ಥತೆ ಮತ್ತು ತುಮುಲಗಳನ್ನು ಚಿತ್ರಿಸಲು ನವ್ಯರು ಕಾದಂಬರಿಗಳಲ್ಲಿ ಪ್ರಯತ್ನಿಸಿದರು. ಯು.ಆರ್.ಅನಂತಮೂರ್ತಿಯವರ ಸಂಸ್ಕಾರ, ಭಾರತೀಪುರ, ಅವಸ್ಥೆ, ಭವ, ಲಂಕೇಶ್ ರವರ 'ಬಿರುಕು', ತೇಜಸ್ವಿಯವರ 'ಸ್ವರೂಪ', ಗಿರಿಯವರ 'ಗತಿಸ್ಥಿತಿ', ಯಶವಂತ ಚಿತ್ತಾಲರ 'ಮೂರು ದಾರಿಗಳು', 'ಶಿಕಾರಿ', ಎ.ಕೆ. ರಾಮಾನುಜನ್ ಅವರ 'ಹಳದಿ ಮೀನು', ಶಾಂತಿನಾಥ ದೇಸಾಯಿ ಯವರ 'ಮುಕ್ತಿ', ಶ್ರೀ ಕೃಷ್ಣ ಆಲನಹಳ್ಳಿಯವರ 'ಕಾಡು', 'ಪರಸಂಗದ ಗೆಡ್ಡೆ ತಿಮ್ಮ', ರಾವ್ ಬಹದ್ದೂರರ 'ಗ್ರಾಮಾಯಣ', ಶಂಕರ ಮೊಕಾಶಿ ಪುಣೇಕರ್ ರವರ 'ಗಂಗವ್ವ' ಮತ್ತು 'ಗಂಗಾಮಾಯಿ' ಮುಂತಾದ ಕಾದಂಬರಿಗಳು ಈ ಕಾಲದಲ್ಲಿ ಪ್ರಕಟವಾದವು.

'ಗಂಗವ್ವ ಮತ್ತು ಗಂಗಾಭೂಮಿ' ಯನ್ನು 'ಸಂಪ್ರದಾಯ ಶರಣ' ಕಾದಂಬರಿ ಎಂದು ಕರೆದು ಅವರ ಒಂದು ಮುಖವನ್ನು ಮಾತ್ರ ಮೊಕಾಶಿಯವರು ತೋರಿಸಿದ್ದಾರೆ. ಈ ಕಾದಂಬರಿ ನಮಗೆ ಮಹತ್ವದ್ದಾಗಿದೆ. ಸಂಪ್ರದಾಯ ಆಧುನಿಕತೆಗಳನ್ನು ಒಟ್ಟಿಗೆಯೇ ಹಿಡಿಯುವುದರಿಂದ, ಇಲ್ಲಿ ಕ್ರಿಯೆ ಎರಡು ಸ್ತರಗಳಲ್ಲಿ ನಡೆಯುತ್ತದೆ. ಒಂದು ಗಂಗವ್ವ ಮತ್ತು ರಾಘಣ್ಣರಂಥ ಪ್ರಚಂಡ ವ್ಯಕ್ತಿಗಳ ನಡುವೆ ನಡೆಯುವ ಸಂಘರ್ಷ: ಇನ್ನೊಂದು ತಾಯಿಯ ಪ್ರಭಾವದಲ್ಲಿಯೇ ಬೆಳೆದು ದುರ್ಬಲನಾದ ಕಿಟ್ಟಿ ತನ್ನ ಪರಿಧಿಯಲ್ಲಿಯೇ ತನ್ನ ವ್ಯಕ್ತಿತ್ವವನ್ನು ಗುರುತಿಸಿಕೊಂಡು ಗಟ್ಟಿಯಾಗುವುದು. ಮೂಲಭೂತ ಪ್ರವೃತ್ತಿಗಳ ನಡುವೆ ನಡೆಯುವ ಮೊದಲಿನ ಕ್ರಿಯೆ ಸಾಂಪ್ರದಾಯಿಕವಾದರೆ, ವ್ಯಕ್ತಿತ್ವದ ಬೆಳವಣಿಗೆಗೆ ಸಂಬಂಧಪಟ್ಟ ಎರಡನೆಯ ಕ್ರಿಯೆ ಆಧುನಿಕವಾದದ್ದು. ಇವೆರಡರಲ್ಲಿ ಅನ್ಯೋನ್ಯ ಸಂಬಂಧ ಕಾದಂಬರಿಗೆ ಅದರ ವಿಶಿಷ್ಟ ಆಕಾರವನ್ನು ಕೊಟ್ಟಿದೆ.

ಸಂಘರ್ಷದ ಸ್ವರೂಪ ಕೂಡ ಈ ಕಾದಂಬರಿಯಲ್ಲಿ ಇಬ್ಬಗೆಯಾಗಿದೆ. ಗಂಗವ್ವ ಮತ್ತು ಅವಳ ಸಮರ್ಥಕರಾದ ದೇಸಾಯಿ ಇವರ ವಿರುದ್ಧದ ರಾಘಪ್ಪನ ಹೋರಾಟ ಬಹಿರಂಗವಾದದ್ದಾದರೆ, ಕಿಟ್ಟಿಯ ಮನಸ್ಸಿನಲ್ಲಿ ನಡೆಯುವ ಹೋರಾಟ ಅವನ ಅಂತರಂಗಕ್ಕೆ ಸಂಬಂಧಿಸಿದ್ದು, ಒಮ್ಮೆ ಸುಖ ಸಮೃದ್ಧಿಗಳನ್ನು ಕಂಡಿದ್ದ ಗಂಗವ್ವ ತನ್ನ ಗಂಡ ಸತ್ತ ನಂತರ ಬಡತನದಲ್ಲಿಯೇ ಜೀವನವನ್ನು ನಡೆಯಿಸಬೇಕಾದರೂ ದೇಸಾಯಿಯಂಥವರ ಸಹಾಯದಿಂದ ಆಕೆ ತನ್ನ ಮಗ ಕಿಟ್ಟಿಯನ್ನು ಮುಂದೆ ತರುತ್ತಾಳೆ. ಅವಳ ಸಹಾಯದಿಂದ ಅವನಿಗೆ ರೆವಿನ್ಯೂ ಖಾತೆಯಲ್ಲಿ ನೌಕರಿಯೂ ದೊರೆಯುತ್ತದೆ. ಕಿಟ್ಟಿ ಮನುಷ್ಯನಾದದ್ದನ್ನು

ನೋಡಬೇಕು. ಅದರಲ್ಲಿಯೇ ತನ್ನ ಬಾಳಿನ ಸಾರ್ಥಕತೆಯಿದೆ. ಅದು ಅವಳ ಜೀವನದ ಸೂತ್ರ. ಕರುಳಿನ ಕರೆ ಅವಳಲ್ಲಿ ಧಾರ್ಮಿಕ ನಂಬುಗೆಗಿಂತ ಪ್ರಬಲವಾಗಿದೆ. ಗಂಗಾಜಲ ಸಾವಿನ ಸಂಕೇತವಾದದ್ದರಿಂದ ಕಾಶಿಯಿಂದ ಬರುವಾಗ ಎಲ್ಲರಂತೆ ಅದನ್ನು ತಂದರೂ ದಾರಿಯಲ್ಲಿಯೇ ಚೆಲ್ಲಿಬಿಡುತ್ತಾಳೆ.

ತನ್ನ ತಮ್ಮ ರಾಘಪ್ಪನಿಂದಾಗಿಯೇ ತಮ್ಮ ಮನೆತನ ಹಾಳಾಯಿತು ಎಂದು ಅವಳು ದೃಢವಾಗಿ ನಂಬಿದ್ದಾಳೆ. ಇದರಿಂದಾಗಿ ಅವನಲ್ಲಿ ಅವಳಿಗೆ ಹೇಳತೀರದ ರೊಚ್ಚು, ರಾಘಪ್ಪ ಒಪ್ಪಂದವನ್ನು ಬಯಸಿ ಬಂದಾಗ ಆದ ಅವಮಾನದಿಂದ ಆತ ಗಂಗವ್ವ ದೇಸಾಯಿಯವರಿಗೆ ಎದುರಾಗಿ ನಿಲ್ಲುತ್ತಾನೆ. ಜಗತ್ತನ್ನೇ ಗೆಲ್ಲಬಲ್ಲ ತನ್ನ ಶಕ್ತಿಯಲ್ಲಿ ಅವನಿಗೆ ಬಲವಾದ ವಿಶ್ವಾಸವಿದೆ. 'ನಿನ್ನ ಕಣ್ಣ ಮುಂದೆ ನಿನ್ನ ಕಿಸೇಕ್ಕ ಹಾಕುತೀನಿ' ಎಂದು ಗಂಗವ್ವನನ್ನು ಆಹ್ವಾನಿಸುತ್ತಾನೆ. ದೇಸಾಯಿ ಅವಳ ಸಹಾಯಕ್ಕೆ ನಿಂತಾಗ 'ದೇಸಾಯಿ ನೀ ನನ್ನ ಮೀರಿಲ್ಲ, ನಿನ್ನ ಮೆಟ್ಟೆ ಹಾಕತೀನಿ' ಎಂದು ಅವನಿಗೂ ಸಡ್ಡು ಹೊಡೆಯುತ್ತಾನೆ. ಗಂಗವ್ವನ ಮಗ ಕಿಟ್ಟಿ ದೇಸಾಯಿಯವರ ಮಗ ವಸಂತ ಇಬ್ಬರನ್ನೂ ಬಲೆಗೆ ಹಾಕಿಕೊಂಡು ಸೇಡಿನ ಹೊಂಚು ಹಾಕುತ್ತಾನೆ. ಆದರೆ ಅವನ ಆಸೆ ಕೈಗೂಡುವುದಿಲ್ಲ. ಅವನ ಆತ್ಮಹತ್ಯೆಯೊಂದಿಗೆ ಕಾದಂಬರಿ ಕೊನೊಗೊಳ್ಳುತ್ತದೆ.

೧೯೫೭ ರಲ್ಲಿ ಪ್ರಕಟವಾದ ರಾವ್ ಬಹದ್ದೂರರ 'ಗ್ರಾಮಾಯಣ' ಕನ್ನಡದ ಉತ್ತಮ ಕಾದಂಬರಿಗಳಲ್ಲಿ ಒಂದು. ಪಾದಳ್ಳಿ ಎಂಬ ಹಳ್ಳಿಯಲ್ಲಿ ಕ್ರಿಯೆ ನಡೆಯುತ್ತದೆ. ಈ ಸಮಾಜವೂ ಅವನತಿಯ ಸ್ಥಿತಿಯಲ್ಲಿದೆ. ಊರನ್ನು ತಂದೆಯಂತೆ ನಡೆಸಿಕೊಂಡು ಹೋಗುತ್ತಿದ್ದ ರಾಣಾಜೀರಾಯನ ಮರಣದ ನಂತರ ಹೆಂಡತಿ ಲಕ್ಷ್ಮೀಬಾಯಿ ವಾಡೆಯನ್ನು ಬಿಟ್ಟು ಹೋಗಿ ಬಹಳ ದಿನಗಳು ಬಾರದೆ ಹಬ್ಬದ ದಿನಗಳಲ್ಲಿ ವಾಡೆಯನ್ನು ಹಾಳುಗೆಡುವ ಜವಾಬ್ದಾರಿ ರಹಿತ ವರ್ತನೆಯಿಂದ ಈ ಅವನತಿ ಪ್ರಾರಂಭವಾಗುತ್ತದೆ. ವ್ಯಕ್ತಿಗಳ ಹೊಣೆಗೇಡಿತನ, ಸ್ವಾರ್ಥ, ಮುರ್ಖತನ, ಇವು ಹಳ್ಳಿಯ ಜೀವನದ ಸುತ್ತ ವಿನಾಶದ ಬಲೆಯನ್ನೇ ನೇಯುತ್ತವೆ. ಈ ಕಾದಂಬರಿಯಲ್ಲಿ ಎಪ್ಪತ್ತೊಂದು ಪಾತ್ರಗಳಿವೆ. ಪ್ರತಿ ಪಾತ್ರಕ್ಕೆ ಕ್ರಿಯೆಯ ಬೆಳವಣಿಗೆಯಲ್ಲಿ ಭಾಗವಿದೆ. ಸಂಕೀರ್ಣವಾದ ಬಲೆ ನಮ್ಮ ಕಣ್ಣ ಮುಂದೆಯೇ ಸಿದ್ಧವಾಗುತ್ತದೆ. ಯಾವ ಘಟನೆಯೂ ಅನಗತ್ಯವಲ್ಲ. ದೊಡ್ಡವರು, ಪ್ರತಿಷ್ಠಿತರು, ಹಣವಂತರು, ಶಾಸ್ತ್ರಗಳನ್ನು ಬಲ್ಲವರು, ಎಲ್ಲರ ಮಧ್ಯೆ ಏನೂ ತಿಳಿಯದ ದೀನ ಮುಗ್ಧ ವ್ಯಕ್ತಿ, ಅಳುಬುರುಕ ಲಕ್ಷ್ಮಣದ ಬಾಯಿಯಿಂದ ನಿಜವಾದ ವಿವೇಕದ ವಾಣಿ ಕೇಳುತ್ತದೆ. "ತಪ್ಪು ಮಾಡಿದವರಿಗೆಲ್ಲ ಶಿಕ್ಷಾ ಆಗಬೇಕು ಎಪ್ಪಾ, ಅದು ದೇವರ ನ್ಯಾಯ". ಈ ನಿಚ್ಚಳವಾದ ಮಾರ್ಗವನ್ನು ಮರೆತು ಎಲ್ಲರೂ ತಮ್ಮ ತಮ್ಮ ಗ್ರಾಮದ ವಿನಾಶದ ಹಾದಿಯನ್ನು ನಿರ್ಮಿಸುತ್ತಾರೆ. ಒಂದೊಂದು ಘಟನೆಯಿಂದಲೂ ಹೊಸ ಘಟನೆಗಳು ಕವಲೊಡೆದು, ಪಾತ್ರ–ಸನ್ನಿವೇಶಗಳ ಪ್ರತಿಕ್ರಿಯೆಯಿಂದ ಅನಿವಾರ್ಯವಾಗಿ ಮುಂದೆ ಸಾಗುವ ಕ್ರಿಯೆಯ ಬೆಳವಣಿಗೆಯು

ಅಚ್ಚರಿಯನ್ನುಂಟು ಮಾಡುತ್ತದೆ. 'ಗ್ರಾಮಾಯಣ' ಒಂದು ರೀತಿಯಲ್ಲಿ ಆಗಿನವರೆಗೆ ಬಂದಿದ್ದ ಕಾದಂಬರಿಗಳಿಗಿಂತ ಭಿನ್ನ- ಆದರ್ಶ ವ್ಯಕ್ತಿಗಳು ಯಾರೂ ಇಲ್ಲಿ ಇಲ್ಲ. ಕರ್ಮವು ಮರಿಗೆ ಮರಿ ಇಡುವ ಅನಿವಾರ್ಯತೆ ಕಾದಂಬರಿಯಾಗಿ ಬೆಳೆದು ನಿಂತಿದೆಯಲ್ಲದೆ ಕಾದಂಬರಿ ನೇರವಾಗಿ ಯಾವ ಮೌಲ್ಯಗಳನ್ನು ಪ್ರತಿಪಾದಿಸುವುದಿಲ್ಲ.

ಕುರ್ತುಕೋಟಿಯವರು ಹೇಳಿದಂತೆ ಗ್ರಾಮಾಯಣ ನೂರಕ್ಕೆ ನೂರು ಪ್ರಮಾಣದಲ್ಲಿ ಸಾಮಾಜಿಕ ಕಾದಂಬರಿ, ಸಾಮಾಜಿಕ ಘಟನೆಗಳ ಮೇಲೆ, ಸಾಮಾಜಿಕ ಶಕ್ತಿಗಳ ಮೇಲೆ, ವೈಯಕ್ತಿಕವೆನ್ನಬಹುದಾದ ಖಾಸಗೀ ಘಟನೆಗಳ ಸಾಮಾಜಿಕ ಆಯಾಮಗಳ ಮೇಲೆ ಸಂಪೂರ್ಣ ಗೋಚರಿಸಿದಂತ ಕಾದಂಬರಿ ಬೇರೊಂದಿಲ್ಲ.

ಯಶವಂತ ಚಿತ್ತಾಲರ 'ಶಿಕಾರಿ' ಎಂಬ ಕಾದಂಬರಿಯಲ್ಲಿ ಬರುವ ಕೇಂದ್ರ ಪ್ರತಿಮೆ ಬೇಟೆ. ಇದು ಕಾದಂಬರಿಯುದ್ದಕ್ಕೂ ಅನೇಕ ಸಂದರ್ಭಗಳಲ್ಲಿ ಕಾಣಿಸಿಕೊಳ್ಳುತ್ತದೆ. ಆಹಾರಕ್ಕೆ ಸಂಬಂಧಪಟ್ಟ ಬೇಟೆಯ ಕ್ರಿಯೆ ಮನುಷ್ಯನ ಮೂಲ ಪ್ರವೃತ್ತಿಗಳಿಗೆ ಸಂಬಂಧಪಟ್ಟದ್ದು. ಅದರೆ, ಈ ಕಾದಂಬರಿಯಲ್ಲಿ ನಡೆಯುವ ಬೇಟೆ ಮನುಷ್ಯನಿಂದ ಪಶು, ಪಕ್ಷಿಗಳ ಬೇಟೆಯಾಗಿರದೆ ಇಂದಿನ ಔದ್ಯೋಗಿಕ ನಾಗರೀಕತೆಯಲ್ಲಿ ಎಲ್ಲಿಯೂ ನೋಡಸಿಗುವ ಮನುಷ್ಯನಿಂದ ಮನುಷ್ಯನ ಬೇಟೆ. ಶಿಕಾರಿಯ ಕೇಂದ್ರ ವ್ಯಕ್ತಿ ನಾಗಪ್ಪ ಇಲ್ಲಿ ಬೇಟೆಯ ಗುರಿ, ಸ್ವಾರ್ಥ ಸಹಿತ ರಕ್ಷಣೆಗಳ ಉದ್ದೇಶಗಳಿಂದ ಒಂದಾದ ಬೇಟೆಗಾರರ ತಂಡವೇ ಅವನ ಬೆನ್ನು ಹತ್ತುತ್ತದೆ. ಅವನ ನಾಶಕ್ಕಾಗಿ ಹೊಂಚು ಹಾಕುತ್ತದೆ. ಇಂಥ ಒಂದು ಸನ್ನಿವೇಶದಲ್ಲಿ ಮನುಷ್ಯನ ಬಾಳಿಗೆ ಅರ್ಥವಿದೆಯೇ? ಇದರಿಂದ ಪಾರಾಗಿ ಬದುಕುವ ಸಾಧ್ಯತೆಗಳಿವೆಯೇ? ಇಂಥ ಸನ್ನಿವೇಶ ಹುಟ್ಟಿತಾದರೂ ಹೇಗೆ? ಅದಕ್ಕೆ ಹೊಣೆಗಾರರು ಯಾರು? ಎನ್ನುವ ಮೂಲಭೂತ ಪ್ರಶ್ನೆಗಳನ್ನು ಎತ್ತುವುದರ ಮೂಲಕ ಶಿಕಾರಿ ನಮಗೆ ಅತ್ಯಂತ ಒಳ್ಳೆಯ ಕಾದಂಬರಿಯಾಗಿದೆ.

ಲಂಕೇಶರ 'ಬಿರುಕು' ಕಾದಂಬರಿಯ ನಾಯಕ ಒಂದು ಪರಿಸರದಿಂದ ಇನ್ನೊಂದು ಪರಿಸರಕ್ಕೆ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಸುತ್ತ ಇವನಿಗೆ ಕಾಣುವುದೇ ಆಷಾಢ ಭೂತಿಗಳೇ. ಇಲ್ಲಿ 'ಫ್ಯಾಂಟಸಿ' ತಂತ್ರವನ್ನು ಲೇಖಕರು ಬಳಸಿಕೊಂಡಿದ್ದಾರೆ. ತಹತಹಿಸುವ ಮನಸ್ಥಿತಿಯ ನಾಯಕ ತನ್ನ ಪ್ರೊಫೆಸರು ರಂಗಪ್ಪ, ಮನೆಯ ಮಾಲೀಕ ಗಂಗಪ್ಪ ಇವರು, ಇವನ ಮನೆಯವರು, ಸ್ನೇಹಿತರು ಎಲ್ಲರ ಮಧ್ಯೆ ಅತೀವ ಹಿಂಸೆಯನ್ನು ಅನುಭವಿಸುತ್ತಾನೆ. ಕಾದಂಬರಿಯ ಮುಕ್ತಾಯ ಸಂದಿಗ್ಧವಾಗಿದೆ. ಅಮೆರಿಕಾದ ಕಾದಂಬರಿಕಾರ ಸ್ಯಾಲಿಂಗರನ 'ಕ್ಯಾಚರ್ಸ್ ಇನ್ ದಿ ರೈ' ನ ಪ್ರಭಾವ ಈ ಕಾದಂಬರಿಯ ಮೇಲಾಗಿದೆ.

ಚಿತ್ರಿತವಾಗುವ ಮನೋಧರ್ಮದಲ್ಲಿ, ಅದರ ಪರಿಸರ ಘಟನೆಗಳಲ್ಲಿ ಸಾಮ್ಯವಿದೆ. ಬಸವರಾಜ ದುರ್ಬಲ ನಾಯಕ, ಸುಳ್ಳು, ಹೊಗಳಿಕೆ, ಪಲಾಯನ ಎಲ್ಲ ಬಳಸುತ್ತಾನೆ. ವೃತ್ತಾಂತ ನಿರೂಪಿಸುವ ಪ್ರಕ್ರಿಯೆಯನ್ನು ಭಾಷೆ ಎಷ್ಟು ಸಮರ್ಥವಾಗಿ ಕ್ರಿಯೆ, ಮನಸ್ಸಿನ ಸ್ಥಿತಿ, ಆವರಣ ಎಲ್ಲವನ್ನು ಹೆಣೆದು ಸೃಷ್ಟಿಸುತ್ತದೆ.

ರಂಗಯ್ಯ ಮತ್ತು ನಾನು ನಮ್ಮ ಸುತ್ತ ದು:ಖದ ವಾತಾವರಣ ಒಂದನ್ನು ಕಟ್ಟಿಕೊಂಡಿದ್ದೆವು. ಸ್ವಲ್ಪ ಹೊತ್ತು ಇಬ್ಬರೂ ಸುಮ್ಮೆ ಕೂತೆವು.

"ಇದನ್ನೆಲ್ಲ ನೋಡಿದರೆ ಈ ಚಿಕ್ಕ ವಯಸ್ಸಿಗೆ ಎಷ್ಟು ನೋವು ಅನುಭವಿಸಿದ್ದೀ ಅಂತ ಆಶ್ಚರ್ಯವಾಗುತ್ತೆ" ಎಂದ ರಂಗಯ್ಯ.

"ಆ ಮುದುಕ, ಬೆಚ್ಚತಿನ ಮನೆ, ಹೊರಗೆ ಕಾಂಪೌಂಡು, ಎಲ್ಲೊ ದೂರದಲ್ಲಿ ಕಾಣುವ ವಾಹನಗಳು ಬಹಳ ಮೋಜಾಗಿತ್ತು. ಬೆಂಗಳೂರು ಚಳಿಗೆ ಮೋಹಕ ಶಕ್ತಿಯಿದೆ. ಆ ವಿಲಕ್ಷಣ ವಾತಾವರಣದಲ್ಲಿ ಯಾಕೆ, ಹೇಗೆ – ನನ್ನ ಭಾವನೆಗಳನ್ನು ತಡೆಯಲಾರದೆ ಅತ್ತುಬಿಟ್ಟೆ".

ಬಸವರಾಜ ವಾಸ್ತವಿಕ ಲೋಕದಿಂದ ಭ್ರಮೆಯ ಲೋಕಕ್ಕೆ ಜಿಗಿಯುತ್ತಾನೆ. ಸ್ಯಾಲಿಂಗರನ ಕಾದಂಬರಿಯ ತಪ್ತನಾಯಕ ಇಬ್ಬರು ಒಳ್ಳೆಯವರನ್ನಾದರೂ ಕಾಣುತ್ತಾನೆ. ಒಳ್ಳೆಯತನದ ಸೂಚನೆಯನ್ನೂ ಎಲ್ಲಿಯೂ ಬಸವರಾಜನಲ್ಲಿ ಕಾಣುವುದಿಲ್ಲ. ಮನೆಯ ಮಾಲೀಕನ ಮಗಳಿಗೆ ಮೋಟು ಜಡೆ, ಪ್ರೊಫೆಸರ್ ಹೆಂಡತಿ, 'ತಿಮಿಂಗಿಲ', 'ಫೋನಿ' ಮನುಷ್ಯನ ಮಗಳು ಲಕ್ಷಣವಾಗಿರಬಾರದು ಎಂಬ ನಿಯಮ ಉಂಟೆ? ಕಾದಂಬರಿ ಯಶಸ್ವಿಯಾಗಿರುವುದಕ್ಕಿಂತ ಸ್ವಾರಸ್ಯವಾದ ಪ್ರಯೋಗ ಎನ್ನಬಹುದು.

ಸಾಹಿತ್ಯ ಮತ್ತು ಪ್ರತಿಭಟನೆ ಇವುಗಳ ಸಂಬಂಧವನ್ನು ವಿವೇಚಿಸುವುದು 'ನಿಜವಾದ ಲೇಖಕ ವಾಸ್ತವ ಮತ್ತು ಆದರ್ಶಗಳ ಡಯಲೆಕ್ಟಿಕ್‌ನ್ನು ಒಟ್ಟಿಗೆ ಗ್ರಹಿಸಿ ಹಿಡಿದಿಡುವುದು ಸಾಧ್ಯವಾಗಬೇಕು. ಆಗ ಮಾತ್ರ ನಿಜವಾಗಬಲ್ಲದು' ಎಂದು ಅನಂತಮೂರ್ತಿ ಬರೆದಿದ್ದಾರೆ.

ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ' ಮತ್ತು 'ಭಾರತೀಪುರ'. 'ಸಂಸ್ಕಾರ'ದ ಕೇಂದ್ರ ಪಾತ್ರ ಪ್ರಾಣೇಶಾಚಾರ್ಯರು, ಧರ್ಮಶಾಸ್ತ್ರಗಳನ್ನೆಲ್ಲ ಬಲ್ಲವರಾಗಿ, ಕಾಯಿಲೆಯಾದ ಹೆಂಡತಿಯನ್ನು ಆದರದಿಂದ ಆರೈಕೆ ಮಾಡಿ ಸೌಂದರ್ಯವೆಲ್ಲ ಲಕ್ಷ್ಮೀದೇವಿಯದು ರತಿಯೆಲ್ಲ ಶ್ರೀ ಕೃಷ್ಣನದು ಎಂದು ಬಾಳು ನಡೆಸುವ ಪ್ರಾಣೇಶಾಚಾರ್ಯರಿಗೆ ನಿಸ್ಸಂಕೋಚವಾಗಿ ಭೋಗ ಜೀವನ ನಡೆಸುವ ನಾರಣಪ್ಪ ಪ್ರತಿಸ್ಪರ್ಧಿ. ನಾರಾಣಪ್ಪ ಸತ್ತಾಗ ಅವನ ಶವಸಂಸ್ಕಾರದ ಗೊಂದಲದಲ್ಲಿ, ಪ್ರಾಣೇಶಾಚಾರ್ಯರನ್ನು

ನಾರಣಪ್ಪನ ಪ್ರೇಯಸಿ ಚಂದ್ರಿ ಸ್ಪರ್ಶಿಸುತ್ತಾಳೆ. ಪ್ರಾಣೇಶಾಚಾರ್ಯರು ದೇಹದ ಸುಖವನ್ನು ಅನುಭವಿಸುತ್ತಾರೆ. ತಾವು ಓದಿನಿಂದ ಪಡೆದಿದ್ದ ಮೌಲ್ಯಗಳ ಮೇಲೆ ಕಟ್ಟಿದ್ದ ಬಾಳು ವಾಸ್ತವಿಕತೆಯ ಸ್ಪರ್ಶದಿಂದ ಉರುಳಿಬಿದ್ದಾಗ, ಪ್ರಾಣೇಶಾಚಾರ್ಯರು ಹೊಸ ಜೀವನದ ಅನ್ವೇಷಣೆಗೆ ಹೊರಡುತ್ತಾರೆ.

ಕಲೆಯ ದೃಷ್ಟಿಯಿಂದ ಇದನ್ನು ಮೀರಿಸುವ ಕಾದಂಬರಿಗಳು ಕನ್ನಡದಲ್ಲಿ ಇಲ್ಲ ಎನಿಸುತ್ತದೆ. ಕಾದಂಬರಿ ಮೊದಲನೇ ವಾಕ್ಯದಿಂದ ಕಥೆಯ ಸುರುಳಿ ಬಿಚ್ಚಿಕೊಳ್ಳುತ್ತದೆ. ಭಾಷೆ ಕಾದಂಬರಿಯ ಜಗತ್ತನ್ನು ಸಮರ್ಥವಾಗಿ ಸೃಷ್ಟಿಸುತ್ತ ಹೋಗುತ್ತದೆ. ನಾರಣಪ್ಪ, ಚಂದ್ರಿ, ಮಾಲೇರ ಪುಟ್ಟ – ಎಲ್ಲ ಜೀವಂತ ಪಾತ್ರಗಳು. ಪ್ರತಿ ಸನ್ನಿವೇಶ ಕಣ್ಣಿಗೆ ಕಟ್ಟುವುದು ಮಾತ್ರವಲ್ಲ, ಅದಕ್ಕೆ ಒಳಗಾದ ಎಲ್ಲರ ದೃಷ್ಟಿಗಳಿಂದ ನಮಗೆ ಕಂಡು ಅದರ ಸಂಕೀರ್ಣತೆ – ಪಾತ್ರಗಳ ಒಳಮನಸ್ಸು ಎಲ್ಲ ಒಟ್ಟಿಗೆ ಸೃಷ್ಟಿಯಾಗುತ್ತದೆ.

ಕ್ರಿಯೆಯನ್ನು ನಡೆಸುವಾಗ ಕಾಣುವ ಕೆಲವು ದೋಷಗಳಿಗೆ ನಾರಣಪ್ಪನ ಶವಸಂಸ್ಕಾರದ ಪ್ರಶ್ನೆಗೆ ಎಷ್ಟು ಜನ ತಿಳಿದವರೂ ಪ್ರಾಣೇಶಾಚಾರ್ಯರೂ ಹಿಂದೂ ಧರ್ಮಶಾಸ್ತ್ರಗಳಲ್ಲಿ ಉತ್ತರ ಕಾಣಲಾಗಲಿಲ್ಲ ಎಂಬ ಸ್ವೀಕೃತ ನಂಬಿಕೆ, ಪ್ರಾಣೇಶಾಚಾರ್ಯರ ಹೆಂಡತಿ ಸತ್ತು ಅವರು ಆಕೆಯ ಸಂಬಂಧದ ಸವಾಲನ್ನು ಎದುರಿಸುವ ಅಗತ್ಯ ತಪ್ಪಿದ್ದು,. ಇಂತಹದಕ್ಕೆ ಇದು ವಾಸ್ತವಿಕ ಕಾದಂಬರಿಯಲ್ಲಿ, ಸಾಂಕೇತಿಕ ಎಂಬ ಸಮಧಾನ ಉಂಟು. ಕೆಲವೆಡೆ ಅನಗತ್ಯ ವ್ಯಂಗ್ಯವಿದ್ದರೂ, ಒಟ್ಟಿನಲ್ಲಿ ನಿರ್ಲಿಪ್ತತೆಯಿಂದ ಕ್ರಿಯೆಯನ್ನು, ಪಾತ್ರಗಳನ್ನೂ ಕಾದಂಬರಿಕಾರರು ಕಂಡಿದ್ದಾರೆ. ಒಳನೋಟ, ಲವಲವಿಕೆ, ವೈಚಾರಿಕತೆ ಎಲ್ಲವನ್ನೂ ಪಡೆದ ಕಾದಂಬರಿ ಇದು. ನಿಯಮ ಬದ್ಧವಾದ ಜೀವನ ನಡೆಸುತ್ತ ಪುರಾಣ, ಆಧ್ಯಾತ್ಮಿಕ ಚಿಂತನೆ ಇವುಗಳಲ್ಲಿ ಮಗ್ನರಾಗಿದ್ದ ಆಚಾರ್ಯರಿಗೆ ಚಂದ್ರಿಯಿಂದ ನಿಸರ್ಗದ ಸಂಬಂಧ ದಕ್ಕುತ್ತದೆ. ಈ ಸನ್ನಿವೇಶದ ಭಾಷೆ ಇಡೀ ಕಾದಂಬರಿಯ ಭಾಷೆಯ ಸಾಂಕೇತಿಕತೆ, ಚಿತ್ರಮಯತೆಗಳಿಗೆ ನಿದರ್ಶನವಾಗಿದೆ.

'ಭಾರತೀಪುರ' ದ ನಾಯಕ ಜಗನ್ನಾಥ ಇಂಗ್ಲೇಂಡಿನಿಂದ ಭಾರತೀಪುರಕ್ಕೆ ಹಿಂದಿರುಗಿದ್ದಾನೆ. ಇಲ್ಲಿ ಬಾಳೆಲ್ಲ ದೇವರು ಮಂಜುನಾಥನ ಹಿಡಿತಕ್ಕೆ ಸಿಕ್ಕಿಹೋಗಿದೆ. ಮಂಜುನಾಥಸ್ವಾಮಿ ಈ ಜೀವನ ಕ್ರಮದ ಕ್ಯಾನ್ಸರ್ ಎನಿಸುತ್ತದೆ ಜಗನ್ನಾಥನಿಗೆ. ಭಾರತೀಪುರದ ಜೀವನ ಕ್ರಮದಲ್ಲಿ ಹೊಲೆಯರು ನಿರ್ಜೀವವಾಗಿದ್ದಾರೆ, ಈ ಹೊಲೆಯರ ಮೂಲಕ ನಾವೆಲ್ಲ ಮತ್ತ ಜೀವಂತರಾಗಬಹುದು. ಶಾಕ್ ಆಗದೆ ಏನೂ ಆಗೊಲ್ಲ, ಎಂದು ತೀರ್ಮಾನಿಸಿ ಅವರನ್ನು ಮಂಜುನಾಥನ ದೇವಸ್ಥಾನಕ್ಕೆ ಹೋಗಿಸಲು ಪ್ರಯತ್ನಿಸುತ್ತಾನೆ.

ತೀರ ಸಮಕಾಲೀನವಾದ, ಮುಖ್ಯವಾದ ಸಮಸ್ಯೆಯನ್ನು ಕಾದಂಬರಿಕಾರರು ಎತ್ತಿಕೊಂಡಿದ್ದಾರೆ. ಭಾರತೀಪುರದ ನಿರ್ವೀಯ ಬಾಳು, ಉಸಿರುಕಟ್ಟಿಸುವ ವಾತಾವರಣ ನಮ್ಮ ಅನುಭವಕ್ಕೆ ಬರುತ್ತದೆ. ಪಾತ್ರ ಸೃಷ್ಟಿ ವೈವಿಧ್ಯಮಯ ಮಾತ್ರವಲ್ಲ, ಜೀವಂತವಾಗಿ ರುವುದನ್ನು ಕಾಣುತ್ತೇವೆ.

ಪುರಾಣಿಕರು, ಅಡಿಗರು, ಜೋಯಿಸರು, ಪ್ರಭು, ಜಗನ್ನಾಥ ಚಿಕ್ಕಮ್ಮ ಎಲ್ಲರಿಂದ ಜೀವನ ವಿಧಾನ, ಅದರಲ್ಲಿ ಅಡಗಿ ಹೋದವರು ಅದಕ್ಕೆ ಸೋತವರು, ಈ ಎಲ್ಲರಿಂದ ಭಾರತೀಪುರ ಜೀವಂತವಾಗುತ್ತದೆ. ನವ್ಯ ಕಾದಂಬರಿಯ ದುರ್ಬಲ ನಾಯಕ ಇಲ್ಲಿ ರೂಪುಗೊಂಡಿದ್ದಾನೆ. ನಾಯಕ ಪ್ರಾಮಾಣಿಕವಾಗಿಯೂ, ಸಹಾನುಭೂತಿ ಉಳ್ಳವನೂ ಆಗಿರುವುದು ಕಾಣಬಹುದು. ಹರಿಜನರಿಗಾಗಿ ಪರಿತಪಿಸುವ ನಾಯಕ ತಾನು ಅವರಿಗಾಗಿ ಏನನ್ನು ಮಾಡಲು ಸಿದ್ಧ ಎಂಬ ಸಂದೇಹ, ತಾನು ಸಮಾಜದಲ್ಲಿ ಪರೋಪಜೀವಿ ಆಗದೆ ಮೊಟ್ಟಮೊದಲು ತಾನು ದುಡಿದು ತನ್ನ ಅನ್ನವನ್ನು ಸಂಪಾದಿಸಬೇಕು ಎನ್ನುವಷ್ಟು ಆತ್ಮಗೌರವ ಇಲ್ಲದ ನಾಯಕನ ಚಟುವಟಿಕೆಗಳೆಲ್ಲ ಒಂದು ಹವ್ಯಾಸ ಅಷ್ಟೆ ಎನ್ನಿಸುತ್ತದೆ.

'ಅವಸ್ಥೆ' ಕನ್ನಡದಲ್ಲಿ ಯಶಸ್ವಿಯಾದ ರಾಜಕೀಯ ಕಾದಂಬರಿ ವ್ಯಕ್ತಿ ಜೀವನ, ಸಿದ್ಧಾಂತ ಮತ್ತು ಸಮಷ್ಠಿ ಜೀವನಗಳ ತುಡಿತವನ್ನು ಭಾವಬುದ್ಧಿಗಳ ನೆಲೆಯಲ್ಲಿ ಶೋಧಿಸುವ ಕಾದಂಬರಿ.

ಕಳೆದ ಹತ್ತು ಹನ್ನೆರೆಡು ವರ್ಷಗಳಲ್ಲಿ ಅಸಾಧಾರಣವಾದ ಜನಪ್ರಿಯತೆಯನ್ನು ಗಳಿಸಿರುವವರು ಡಾ. ಎಸ್.ಎಲ್.ಭೈರಪ್ಪ ನವರ 'ವಂಶವೃಕ್ಷ', 'ದೂರಸರಿದರು', 'ಧರ್ಮಶ್ರೀ', 'ಗೃಹಭಂಗ', 'ದಾಟು' ಈ ಕೃತಿಗಳನ್ನು ಓದುಗರು ಮೆಚ್ಚಿಕೊಳ್ಳುವುದು ಬಾಳಿನಲ್ಲಿ ಆಳವಾದ ಶ್ರದ್ಧೆಗಾಗಿ ಮತ್ತು ಅನುಭವದ ಗಟ್ಟಿತನಕ್ಕಾಗಿ.

'ವಂಶವೃಕ್ಷ ' ದ ಶ್ರೀನಿವಾಸ ಶ್ರೋತ್ರಿಯರಿಗೆ ತಮ್ಮ ಮನೆತನದ ಅಭಿಮಾನ ಅಪಾರ. ದೊಡ್ಡ ವಿದ್ವಾಂಸರು, ಶುದ್ಧ ಬಾಳಿನವರು. ಮಗ ತೀರಿಕೊಳ್ಳುತ್ತಾನೆ. ತಾರುಣ್ಯ ತುಳುಕುತ್ತಿರುವ ಸೊಸೆ ಕಾತ್ಯಾಯಿನಿ ಮತ್ತು ಎಳೆಯ ಮೊಮ್ಮಗ ಶ್ರೋತ್ರಿಯರ ಮನೆಯಲ್ಲೆ ಉಳಿಯುತ್ತಾರೆ. ಒಂದು ರೀತಿಯಲ್ಲಿ ಶ್ರೋತ್ರಿಯರ ಶಿಷ್ಯನಾದ ಸದಾಶಿವರಾವ್, ಅವನ ತಮ್ಮ ರಾಜ, ಕಾತ್ಯಾಯಿನಿ, ಸ್ವತ: ಶ್ರೋತ್ರಿಯರು ಎಲ್ಲ ಜೀವನದಲ್ಲಿ ಹಲವು ಪರೀಕ್ಷೆಗಳಿಗೆ ಗುರಿಯಾಗುತ್ತಾರೆ. ಸಹಜ ಪ್ರವೃತ್ತಿಯೇ ಮನುಷ್ಯನಿಗೆ ಪ್ರಧಾನವಲ್ಲ, ಅದಕ್ಕೆ ಕಡಿವಾಣ ಹಾಕುವ ಸಂಸ್ಕಾರಬೇಕು ಎನ್ನುವ ಶ್ರೋತ್ರಿ ಯೌವನದಲ್ಲಿ ಹೆಂಡತಿಯಿಂದ ದೂರವಾದರೂ, ತಾನಾಗಿ ಬಂದ ಹೆಣ್ಣನ್ನು ದೂರ ಇಡುತ್ತಾರೆ. ಕಾತ್ಯಾಯಿನಿ ಮತ್ತೆ ಮದುವೆ ಮಾಡಿಕೊಳ್ಳುವ, ಮತ್ತೆ ತನ್ನ ಮಗನನ್ನು ಕರೆದೊಯ್ಯುವ ಬಯಕೆ ವ್ಯಕ್ತಪಡಿಸಿದಾಗ, ನಿರ್ಧಾರದ ಸ್ವಾತಂತ್ರ್ಯವನ್ನು ಅವಳಿಗೆ ಬಿಡುತ್ತಾರೆ. ಕಡೆಗೆ ತಾವು ಅಷ್ಟು ಅಭಿಮಾನವಿಟ್ಟುಕೊಂಡಿದ್ದ ಗೋತ್ರಕ್ಕೂ

ತಮಗೂ ಸಂಬಂಧವಿಲ್ಲ ಎಂದು ತಿಳಿದಾಗ ಸನ್ಯಾಸಿಯಾಗುತ್ತಾರೆ. ಶ್ರೋತ್ರಿಯವರಿಗೆ ಪೂರ್ವಿಕರಲ್ಲಿ ಅಭಿಮಾನವಾದರೆ, ಮಗುವಿನಲ್ಲಿ ಅಭಿಮಾನವಿಟ್ಟ ಕಾತ್ಯಾಯನಿ, ತನ್ನ ಪುಸ್ತಕಗಳಲ್ಲಿ ಜೀವಂತವಾಗಿರಬಯಸುವ ಸದಾಶಿವರಾಯ ಇವರಲ್ಲಿಯೂ ವಂಶಾಭಿಮಾನ ಮತ್ತೊಂದು ರೀತಿಯಲ್ಲಿ ವ್ಯಕ್ತವಾಗುತ್ತದೆ.

'ಗೃಹಭಂಗ' ದ ಕೇಂದ್ರ ವ್ಯಕ್ತಿ ನಂಜಮ್ಮ, ಕೆಲಸಕ್ಕೆ ಬಾರದ, ನಿಜವಾಗಿ ಮನುಷ್ಯ ವರ್ಗಕ್ಕೆ ಸೇರದ, ಪ್ರವೃತ್ತಿಗಳ ಮಟ್ಟದಲ್ಲೆ ಬದುಕುವ ಗಂಡುಪ್ರಾಣಿಯ ಕೈ ಹಿಡಿದು ತನ್ನ ಮಕ್ಕಳಿಗಾಗಿ ಅವಿರತವಾಗಿ, ಉಸಿರಾಡುವಷ್ಟೇ ಸಹಜವಾಗಿ ಹೋರಾಡುತ್ತಾಳೆ. ನಂಜಮ್ಮ, ಇಲ್ಲಿ ತೀವ್ರ ನಿಷ್ಠುರ ವಾಸ್ತವಿಕತೆ ಇದೆ. ಹರೆಯದ ಹುಡುಗಿಯ ಹೆಣಕ್ಕೆ ಸಂಸ್ಕಾರ ಮಾಡಿ ಬಂದವರ ಮುಂದೆ, ತಾವೇ ಸಾವಿನ ಅಂಚಿನಲ್ಲಿರುವ ಮುದುಕ ಅಯ್ಯ ಶಾಸ್ತ್ರಿಗಳು ಕೈ ಒಡ್ಡುತ್ತಾರೆ; "ಅಲ್ಲಿಗೆ ಬಂದ್ರೆ ಈ ಸಾಯಾಂಕಾಲದ ಹೊತ್ತು ತಣ್ಣೀರು ಮುಳುಗಬೇಕು, ಮೈಗಾಗಲ್ಲ ಅಂತ ಬರಲಿಲ್ಲ. ನನ್ನ ಬರಲಿಲ್ಲ. ನನ್ನ ಪಾಲಿನ ದಕ್ಷಿಣೆ ತಾ". ನಂಜಮ್ಮ ನಿಸರ್ಗದ ಒಂದು ಶಕ್ತಿಯಾಗುತ್ತಾಳೆ.

ಉಳಿವಿಗಾಗಿ ದಣಿವಿಲ್ಲದೆ ಸೋಲೊಪ್ಪದೆ ಸಾವಿರ ಜನ ತನ್ನ ಮೇಲೆ ಕಾಲಿಟ್ಟು ನಡೆದರೂ ಉಳಿಯಲು ಹೋರಾಡುವ ಹುಲ್ಲಿನಂತೆ ಹೋರಾಡುತ್ತಾಳೆ. ಅವಳ ಈ ಅವಿರತವಾದ ಅಬ್ಬರವಿಲ್ಲದ ಹೋರಾಟ ತನ್ನ ಮಕ್ಕಳಿಗಾಗಿ.

ಭೈರಪ್ಪನವರ ಇತ್ತೀಚೆಗಿನ ಕಾದಂಬರಿ 'ದಾಟು' ಜಾತಿಯ ಪ್ರಶ್ನೆ ಇಲ್ಲಿ ಮುಖ್ಯ ವಸ್ತು. ಇಲ್ಲಿಯೂ ಕೇಂದ್ರ ವ್ಯಕ್ತಿ ಶಕ್ತಿವಂತ ಹೆಣ್ಣು – ಸತ್ಯಭಾಮ. ಜಾತಿಯ ಚರಿತ್ರೆಯನ್ನು ಗುರುತಿಸುವ ಕಾದಂಬರಿ ಅದನ್ನು ಇಂದಿನ ಸಂದರ್ಭದಲ್ಲಿಯೂ ನೋಡುತ್ತದೆ. ಇಲ್ಲಿನ ಎಲ್ಲ ಪಾತ್ರಗಳೂ ಯಾವುದೋ ನಿರ್ಬಂಧಗಳನ್ನು ದಾಟುವ ಕ್ರಿಯೆಯಲ್ಲಿ ನಿರತವಾಗಿವೆ. ಜಾತಿಯ ಸಮಸ್ಯೆಯನ್ನು ಬೇರೆ ಬೇರೆ ದೃಷ್ಟಿಗಳಿಂದ ಕಾದಂಬರಿ ಪರಿಚಯ ಮಾಡಿಕೊಡುತ್ತದೆ. ಲವಲವಿಕೆ, ಸ್ವಂತಿಕೆ ಇರುವ ಸತ್ಯಬಾಮ, ಜಾತಿಯ ಅಭಿಮಾನವನ್ನು ತಮ್ಮ ರೀತಿಯಲ್ಲೆ ಬಳಸಿಕೊಂಡ ಪಟೇಲರು, ಈ ವ್ಯವಸ್ಥೆಗೆ ರೊಚ್ಚಿಗೆದ್ದ ಮೋಹನದಾಸ [ಗಾಂಧಿ ಭಕ್ತರಾದ ತಂದೆಯನ್ನು ಕುರಿತು ಅವನು ಹೇಳುತ್ತಾನೆ,. ಅವರ ಮಾನಸಿಕ ದಾಸ್ಯ ಎಷ್ಟು ಆಳವಾಗಿದೆ ಎಂದರೆ ಮಗನಿಗೆ ಹೆಸರಿಡಬೇಕಾದರೂ ಗಾಂಧಿ ಹೆಸರಲ್ಲದೆ ಬೇರೆ ಹೊಳೆಯಲಿಲ್ಲ ಅವರಿಗೆ? ಕೆಲವೇ ಪುಟಗಳಲ್ಲಿ ಸುಳಿದು ಮಾಯವಾಗುವ ಮೀರ – ಎಲ್ಲ ಜೀವಂತ ವ್ಯಕ್ತಿಗಳಾಗುತ್ತಾರೆ.

ಭೈರಪ್ಪನವರು ಕಾದಂಬರಿಗಳ ಪಾತ್ರಗಳಲ್ಲಿ ರೂಪಿಸಿಕೊಳ್ಳಲು ಸಮರ್ಥವಾಗಿ ಪ್ರಯತ್ನಿಸುತ್ತವೆ. ಜೀವನ ಶ್ರದ್ಧೆ, ಮನುಷ್ಯನ ವ್ಯಕ್ತಿತ್ವದಲ್ಲಿ ನಂಬಿಕೆ, ವಿಶಾಲವಾದ ಗಟ್ಟಿಯಾದ ಅನುಭವ ಭೈರಪ್ಪನವರ ಕಾದಂಬರಿಗಳಿಗೆ ಜೀವ ತುಂಬಿವೆ.

**ದಲಿತ – ಬಂಡಾಯ**

ಇದು ಆಧುನಿಕ ಕನ್ನಡ ಸಾಹಿತ್ಯದ ಒಂದು ಮಹತ್ವದ ಘಟ್ಟವಾಗಿದ್ದು, 'ದಲಿತ- ಬಂಡಾಯ' ಎಂಬ ಎರಡು ಸಾಹಿತ್ಯ ಪರಿಕಲ್ಪನೆಗಳ ಮನೋಧರ್ಮವು ವಸ್ತು, ಅನುಭವ, ಸಂವೇದನೆ, ಅಭಿವ್ಯಕ್ತಿ ಕ್ರಮ ಮತ್ತು ಮೌಲ್ಯಗಳು ಎಂಬ ದೃಷ್ಟಿಕೋನದಿಂದ ಭಿನ್ನವಾಗಿದ್ದರೂ, ಆಶಯ ಮತ್ತು ಚಾರಿತ್ರಿಕ ದೃಷ್ಟಿಯಿಂದ ಅವುಗಳು ಒಂದಕ್ಕೊಂದು ಪೂರಕ ಸಂಬಂಧವನ್ನು ಸ್ಥಾಪಿಸಿಕೊಂಡಿರುವ ಒಂದು ನಾಣ್ಯದ ಎರಡು ಮುಖಗಳಾಗಿವೆ. ಕನ್ನಡ ಸಾಹಿತ್ಯ ಪರಂಪರೆಯ ಹಿನ್ನೆಲೆಯಲ್ಲಿ ಒಂದು ಮಹತ್ವದ ಸ್ಥಾನ ಮಾನವನ್ನು ಹೊಂದಿದ್ದು, ಇಪ್ಪತ್ತನೆಯ ಶತಮಾನದ ಎಪ್ಪತ್ತರ ದಶಕ ಉತ್ತರಾರ್ಧದಲ್ಲಿ ಅಧಿಕೃತವಾಗಿ ಕಾಣಿಸಿಕೊಳ್ಳುವ ಮೂಲಕ ಇಡೀ ಕನ್ನಡ ಸಾಹಿತ್ಯಕ್ಕೊಂದು ಹೊಸ ತಿರುವನ್ನು ಕೊಟ್ಟಿತು.

ಯಾವುದೇ ಸಾಹಿತ್ಯ ಪಂಥವು ತನಗಿರುವ ಎಲ್ಲ ಸಾಧ್ಯತೆಗಳನ್ನು ಮುಗಿಸಿಕೊಂಡ ಮೇಲೆ ತನ್ನ ಪ್ರಭಾವವನ್ನು ಕಳೆದುಕೊಳ್ಳುತ್ತದೆ. ಒಂದು ಹೊಸ ಸಾಹಿತ್ಯ ಮಾರ್ಗದ ಹುಡುಕಾಟ ಪ್ರಾರಂಭವಾಗುತ್ತದೆ. ಈ ಮಾರ್ಗದಲ್ಲಿ ಹುಟ್ಟಿಕೊಂಡ ಸಾಹಿತ್ಯ ದಲಿತ ಬಂಡಾಯ. ಈ ಸಾಹಿತ್ಯ ಚಳುವಳಿಗಳೆಲ್ಲವೂ ಹೆಚ್ಚು ದೂರ ಸಾಗದೆ ಸ್ಥಿತ್ಯಂತರ ಬದುಕಿನೊಂದಿಗೆ ಬದಲಾವಣೆ, ಪಡೆದುಕೊಳ್ಳುವ ಮೂಲಕ ಕನ್ನಡ ಸಾಹಿತ್ಯಕ್ಕೆ ಸಾರ್ಥಕ ಕೊಡುಗೆಗಳನ್ನು ಕೊಟ್ಟಿದೆ. ಅಂತೆಯೆ ಸಮಾಜ ಮತ್ತು ಸಾಹಿತ್ಯಗಳ ಸಂಬಂಧಗಳ ದೃಷ್ಟಿಯಿಂದ ಅವುಗಳ ಬಿರುಕನ್ನು ಗಮನಿಸಿದ 'ದಲಿತ ಬಂಡಾಯ ಸಾಹಿತ್ಯ'ವು ಮೇಲು–ಕೀಳು, ಬಡವ–ಶ್ರೀಮಂತ, ಸಾಮಾಜಿಕ ನ್ಯಾಯ, ವರ್ಣ, ವರ್ಗ ಮತ್ತು ಅಸ್ಪೃಶ್ಯ ಶೋಷಣೆ, ಹಸಿವು, ಮುಂತಾದವುಗಳ ಮೇಲೆ ಬೆಳಕನ್ನು ಚೆಲ್ಲಿದರು.

ರಾಮಮನೋಹರ ಲೋಹಿಯಾ, ಅಂಬೇಡ್ಕರ್, ಗಾಂಧೀಜಿ, ಮಾವೋ, ಮಾರ್ಕ್ಸ್, ಜ್ಯೋತಿಭಾಪುಲೆ, ಪೆರಿಯಾರ್, ನಾರಾಯಣ ಗುರು ಇನ್ನು ಮೊದಲಾದವರು ಸೈದ್ಧಾಂತಿಕ ಚಿಂತನೆಯ ಬೆಳಿನಲ್ಲಿ ಬದುಕನ್ನು ಹಸನುಗೊಳಿಸುವ ನೆಲೆಗಳಿಗೆ ನುಡಿಕೊಟ್ಟಿತು.

ದಲಿತ – ಬಂಡಾಯ ಕಾದಂಬರಿಕಾರರಲ್ಲಿ ದೇವನೂರು ಮಹಾದೇವ, ಮ.ನ. ಜವರಯ್ಯ, ಕುಂ. ವೀರಭದ್ರಪ್ಪ, ಬರಗೂರು ರಾಮಚಂದ್ರಪ್ಪ, ಚೆನ್ನಣ್ಣವಾಲೀಕರ, ಹೊರೆಯಾಲ ದೊರೆಸ್ವಾಮಿ, ಜಾಣಗೆರೆ

ವೆಂಕಟರಾಮಯ್ಯ, ಜಿ.ನಾಯಕ, ಕಾಳೇಗೌಡ ನಾಗಾವರ, ಅರವಿಂದ ಮಾಲಗತ್ತಿ ಇನ್ನು ಮೊದಲಾದ ಪ್ರಮುಖ ಕಾದಂಬರಿಕಾರರು ಇವತ್ತಿನವರೆಗೆ ಶೋಷಣೆ, ದಬ್ಬಾಳಿಕೆ, ಲಿಂಗಭೇದ, ಜಾತಿಯ ಶೋಷಣೆ, ಹಸಿವು-ಬಡತನ, ನಿರಾಸೆ, ಹತಾಶೆ ಮೊದಲಾದ ಅಂಶಗಳನ್ನು ತಂತಮ್ಮ ಕೃತಿಗಳಲ್ಲಿ ಚಿತ್ರಿಸಿದ್ದಾರೆ. ಆಡು ಭಾಷೆಯನ್ನು ಬಳಸಿ ಜನರ ಜೀವನದ ದನಿಗೆ ಇಂಬು ನೀಡಿ ಸಾರ್ಥಕವಾಗಿದ್ದಾರೆ.

ದಲಿತ ಜೀವನದ ಬಗ್ಗೆ ಅತ್ಯಂತ ಪ್ರಾಮಾಣಿಕತೆಯಿಂದ ತಮ್ಮ ಅನುಭವದ ಮೇಲೆ ಸಂಪೂರ್ಣ ನಿಯಂತ್ರಣವನ್ನು ಸಾಧಿಸಿ, ಭಾಷೆಯ ಸಾಧ್ಯತೆಗಳ ಅರಿವಿನಿಂದ ಬರೆಯುತ್ತಿರುವ ದೇವನೂರು ಮಹಾದೇವರು ನಮ್ಮ ಮಹತ್ವದ ಲೇಖಕರಲ್ಲೊಬ್ಬರು. ಕಿರುಕಾದಂಬರಿ ಒಡಲಾಳ ಅವರ ಸಾಹಿತ್ಯ ಶಕ್ತಿಯ ಉತ್ತಮ ನಿದರ್ಶನವಾಗಿದೆ.

ಒಡಲಾಳ ಒಂದು ದಲಿತ ಪರಿವಾರದ ಎರಡು ಅವಸ್ಥೆಗಳನ್ನು ನಮ್ಮೆದುರು ತೆರೆದು ತೋರಿಸುತ್ತದೆ. ಈ ಅವಸ್ಥೆಗಳ ಸ್ವರೂಪ ಮತ್ತು ಅವುಗಳ ನಡುವಿನ ಅಂತರಗಳಲ್ಲಿ ಕಾದಂಬರಿಯ ಅರ್ಥಕ್ರಿಯೆಯ ಉಗಮವಿದೆ. ಒಡಲಾಳದ ಮೊದಲಿನ ಐದು ವಿಭಾಗಗಳಲ್ಲಿ ಸಾಕವ್ವನ ಪರಿವಾರದ ದಿನಚರ್ಯೆಯ, ಸಾಮಾನ್ಯವೆಂದು ತೋರಬಹುದಾದ ಒಂದು ನೋಟ, ಈ ಪರಿವಾರ ಒಡೆದು ಮೂರು ಪಾಲಾಗಿದ್ದರೂ ಅದರಲ್ಲಿನ ವ್ಯಕ್ತಿಗಳ ನಡುವಿನ ಕೌಟುಂಬಿಕ ಸಂಬಂಧಗಳಿಗೆ ಚ್ಯುತಿ ಬಂದಿಲ್ಲ. ಪರಿವಾರದ ಯಜಮಾನಿ ಸಾಕವ್ವ ಈ ದೃಶ್ಯದಲ್ಲಿ ಎದ್ದು ಕಾಣುವ ವ್ಯಕ್ತಿ. ಹುಂಜವನ್ನು ಕಳೆದುಕೊಂಡು ಸಧ್ಯಕ್ಕೆ ಹತಾಶಳಾಗಿದ್ದರೂ, ತನ್ನ ಕರ್ತೃತ್ವ ಶಕ್ತಿಯ ಬಗ್ಗೆ ಅವಳಲ್ಲಿ ಅಭಿಮಾನವಿದೆ. "ಹುಟ್ಟಿದ್ದು ಹೆಣ್ಣೆಂಗ್ಸಾದರೂ ಗಂಡ್ಸ ಮೀರಿ ಕಷ್ಟಪಟಗೊಂಡು ಗೇದು ಸಂಪಾದ್ಸಿವಿನಿ ಕಣೋ ಭೂಪತಿ ಆಸ್ತಿ ನನ್ನ ಸ್ವಾರ್ಜಿತ ಆಸ್ತಿ".

ಮನೆಮಾರು ಪಾಲಗಿದ್ದಾಕ್ಕಾಗಿ ತನ್ನ ಹಿರಿಯ ಮಗ ಕಾಳಣ್ಣನನ್ನು ತನ್ನ ಹೆಂಡತಿ ಚೆಲುವಮ್ಮನ ಮೇಲೆ ಹತೋಟಿ ಇಡದ್ದಕ್ಕಾಗಿ ಇನ್ನೊಬ್ಬ ಮಗ ಸಣ್ಣಯ್ಯನನ್ನು ಅವಳು ಹೀಯಾಳಿಸುತ್ತಾಳೆ. ಬೇಜವಾಬ್ದಾರಿ ಗಂಡನನ್ನು ಕಟ್ಟಿಕೊಂಡು ಕಷ್ಟಪಡುವ ಮಗಳು ಗೌರಮ್ಮ, ಅವಳ ಮಕ್ಕಳು ದುಫಟಿ ಕಮೀಷನರ್ ಮತ್ತು ಶಿವು ಇವರ ಬಗ್ಗೆ, ಕಿರಿಯ ಮಗಳು ಪುಟ್ಟ ಗೌರಿಯಲ್ಲಿ ಅವಳಿಗೆ ಪ್ರೀತಿಯಿದೆ. "ನನ್ನ ಇರೋ ಆಸ್ತೀ ನೆಲ್ಲ ನಿನ್ನ ಕಿರೀ ಮಗನ್ಗಿ ಬರೆದು ಸತ್ತೊಯ್ತಿನಿ" ಎಂದು ಗೌರಮ್ಮನಿಗೆ ಅವಳು ಹೇಳಿದಾಗ ಮಕ್ಕಳಿಲ್ಲದ ಅಣ್ಣನ ಆಸ್ತಿಯ ಮೇಲೆ, ಅವ್ವನ ಆಸ್ತಿಯ ಮೇಲೆ ಕಣ್ಣಿಟ್ಟ ಸಣ್ಣಯ್ಯನಿಗೆ, ಅವನ ಹೆಂಡತಿ ಚೆಲುವಮ್ಮನಿಗೆ ಕೋಪ ಬರುತ್ತದೆ. ಸಾಕವ್ವ ಚಲುವಮ್ಮ ಜಗಳವಾಡುತ್ತಾರೆ. ಹೊರಗೆ ಗಣ್ಯನಾದ ಕಾಳಯ್ಯ ತನ್ನ ಹಟ್ಟಿಯಲ್ಲಿ 'ಕ್ಯಾಬಿನೈ' ಅದದಕ್ಕೆ ಹಳಹಳಿಸುತ್ತಾನೆ. ಚೆಲುವಮ್ಮ ಗಂಟು ಮೂಟೆ ಕಟ್ಟಿಕೊಂಡು ಹೊರಟು ನಿಂತಾಗ ಕಾಳಯ್ಯ ಅವಳನ್ನು ತಡೆಯುತ್ತಾನೆ. ಇಂಥ ಪರಸ್ಥಿತಿಯಲ್ಲಿಯೂ ಇನ್ನು ಕಹಿಯಾಗದ

ಪುಟ್ಟಗೌರಿ, ಶಿವು ನವಿಲಿನ ಚಿತ್ರ ಬರೆಯುತ್ತಾರೆ. ಯಮಧರ್ಮ ರಾಯನಿಗೂ ಹೆದರದ ಸಾಕವ್ವ ಗೋಣಿಚೀಲದ ಹೊರೆ ತಂದು ಕಡಲೆಕಾಯಿ ಸುರಿದಾಗ ಸಾಕವ್ವನ ಪರಿವಾರದಲ್ಲಿ ಹುಟ್ಟಿಕೊಂಡಿದ್ದ ಬಿಕ್ಕಟ್ಟು, ಹುಂಜದ ನಷ್ಟದಿಂದಾಗಿ ಅವಳಿಗೊದಗಿದ ದು:ಖ ಇಲ್ಲವಾಗುತ್ತದೆ. ಮನೆಯವರೆಲ್ಲರೂ ಕೂಡಿ ಸಂತೋಷದಿಂದ ಕಡಲೆಕಾಯಿ ತಿನ್ನುತ್ತಾರೆ.

ಈ ಅವಸ್ಥೆಯಲ್ಲಿ ಸಾಕವ್ವನ ಪರಿವಾರದ ಬಡತನ, ಅಲ್ಲಿ ಹುಟ್ಟಿಕೊಳ್ಳುವ ಬಿಕ್ಕಟ್ಟು, ವ್ಯಕ್ತಿ – ವ್ಯಕ್ತಿಗಳ ತಾಕಲಾಟ, ಕಹಿ ಕಾರ್ಪಣ್ಯಗಳಲ್ಲಿ ವಾಸ್ತವ ಚಿತ್ರವಿದೆ. ಮಾನವೀಯತೆ ಎದ್ದು ಕಾಣುವ ಗುಣವಾಗಿದೆ. ಎಲ್ಲರೂ ಕೂಡಿ ಕಡಲೆಕಾಯಿ ತಿನ್ನುವ ನೋಟ ಈ ಪರಿವಾರದ Solidarity ಯನ್ನು ಎತ್ತಿ ತೋರಿಸುತ್ತದೆ.

ಕನ್ನಡ ಕಾದಂಬರಿ ನಡೆದು ಬಂದ ರೀತಿಯ ಬಗ್ಗೆ, ಅಂದರೆ ಇಂದಿನ ಪರಿಸ್ಥಿತಿಯ ಬಗ್ಗೆ ಇಲ್ಲಿಯವರೆಗೆ ಚರ್ಚಿಸಲಾಗಿದೆ. 'ಜನಪ್ರಿಯ' ಕಾದಂಬರಿಯ ಹಲವಾರು ರೀತಿಗಳು ಹಿನ್ನೆಲೆಯಲ್ಲಿವೆ. ಎಂಬುದನ್ನು ಲಕ್ಷ್ಯದಲ್ಲಿಡಬೇಕು. ಸಾಕ್ಷರತೆಯ ಪ್ರಸಾರ, ಶಿಕ್ಷಣದ ಪ್ರಸಾರ, ನಗರೀಕರಣದ ಒತ್ತಡಗಳು. ಸಾಮಾಜಿಕ ಸಾಂಸ್ಕೃತಿಕ ಪ್ರತಿಕ್ರಿಯೆಯ ತೀವ್ರ ಪ್ರವಾಹಗಳು ಹರಿದಿವೆ. ಈ ವರ್ಗದ ಮನ ರಂಜನೆಗಾಗಿ 'ಜನಪ್ರಿಯ' ಕಾದಂಬರಿಯ ಹಲವಾರು ರೀತಿಗಳು ಹುಟ್ಟಿಕೊಂಡಿವೆ. ಕೌಟುಂಬಿಕ ಸಮಸ್ಯೆಗಳನ್ನು ತೆಗೆದುಕೊಂಡು, ಒಂದು ವ್ಯವಹಾರಿಕ ಪಾತಳಿಯ ಮೇಲೆ, ಸಾಮಾನ್ಯ ಅಭಿರುಚಿಗೆ ಹೊಂದಿಕೊಂಡು, ರಂಜಕವಾಗಿ, ವೈಚಾರಿಕತೆಯ ಯಾವ ಗದ್ದಲವಿಲ್ಲದೆ, ಎಲ್ಲರಿಗೂ ಒಪ್ಪಿಗೆಯಾಗುವ ಮೌಲ್ಯಗಳ ಚೌಕಟ್ಟಿನಲ್ಲಿ, ಘಟನಾ ಪ್ರಧಾನವಾದಂಥ ಕಥೆ ಹೇಳುವ 'ಜನಪ್ರಿಯ' ಕಾದಂಬರಿ ತುಂಬ ಬೆಳೆದಿದೆ.

ತೀವ್ರವಾಗಿ ಬದಲಾಗುತ್ತಿರುವ ಸಮಾಜದಲ್ಲಿ ಸಮಸ್ಯೆಗಳಿಗೇನೂ ಕಡಿಮೆಯಿಲ್ಲ; ವೈಚಾರಿಕ ಘರ್ಷಣೆ, ರಾಜಕೀಯ ಘರ್ಷಣೆ, ಸಾಮಾಜಿಕ ಘರ್ಷಣೆ, ಮಾನಸಿಕ ಬಿಕ್ಕಟ್ಟುಗಳು ಇತ್ಯಾದಿ ಸಂಗತಿಗಳು ದೈನಂದಿನ ಜೀವನದ ಅಂಗಗಳಾಗಿವೆ. ಲಾರೆನ್ಸ್ ಹೇಳುವಂತೆ "ಜೀವನದ ಪ್ರಶಾಂತ ಮಯವಾದ ಹೊತ್ತಿಗೆಯೆಂದರೆ ಕಾದಂಬರಿ. ಇಂಥ ಸಾಹಿತ್ಯ ಪ್ರಕಾರ ಹಲವಾರು ಆಕರ್ಷಕ ರೂಪುಗಳನ್ನು ತಳೆಯಬಹುದಾಗಿದೆ. ವೈಚಾರಿಕ ಕಾದಂಬರಿ, ವೈಜ್ಞಾನಿಕ ಕಾದಂಬರಿ, ಮನ:ಶಾಸ್ತ್ರೀಯ ಕಾದಂಬರಿ, ಸಮಸ್ಯಾತ್ಮಕ ಕಾದಂಬರಿ ಇತ್ಯಾದಿಗಳು ಜನಜೀವನಕ್ಕೆ ತೀರ ಹತ್ತಿರವಾದ, ಓದುಗರ ಮನಸ್ಸನ್ನು ಆಳವಾಗಿ ಮುಟ್ಟುವಂಥ, ಆಕರ್ಷಕವಾಗಿ, ಶ್ರೀಮಂತವಾದ ಸಾಹಿತ್ಯ ಪ್ರಕಾರವೆಂದರೆ ಕಾದಂಬರಿ. ಅದು ಯಾವಾಗಲೂ ಬೆಳೆಯುತ್ತ ಹೋಗುವ, ಟಸಿಲು ಟಸಿಲಾಗಿ ದಿಕ್ಕು ದಿಕ್ಕುಗಳನ್ನು ವ್ಯಾಪಿಸುತ್ತ ಹೋಗುವ ಸಾಹಿತ್ಯ ಪ್ರಕಾರ.

# ಅಧ್ಯಾಯ – ೩

## ಕನ್ನಡ ಕಾದಂಬರಿಗಾರ್ತಿಯರ ನಡುವೆ ಎಚ್.ನಾಗವೇಣಿಯವರ ಸ್ಥಾನ

ಸ್ವಾತಂತ್ರೋತ್ತರ ಹಾಗೂ ಸ್ವಾತಂತ್ರ್ಯಪೂರ್ವ ಭಾರತದ ಸಾಮಾಜಿಕತೆಯ ಹಿನ್ನೆಲೆಯಲ್ಲಿ ಕನ್ನಡ ಮಹಿಳಾ ಸಾಹಿತ್ಯವನ್ನು ವಿಶ್ಲೇಶಿಸುವ ಕಾರ್ಯ ಸುಲಭವಲ್ಲ. ಬೃಹತ್ ವಾದ್ಯಗಳ ಮೇಳ ಹೊರ ಹೊಮ್ಮಿಸುವ ಸ್ವರ ಸಮೃದ್ಧಿಯಾಳದಲ್ಲಿ ಮಿಡಿಯುವ ಜೀವನಾಡಿಗೆ ಕಿವಿಗೊಡುವ ಕಾರ್ಯವಿದು.

ಇಪ್ಪತ್ತನೆಯ ಶತಮಾನ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಮಹತ್ವದ ಬದಲಾವಣೆಗಳನ್ನು ಕಂಡ ಕಾಲ. ಮಹಿಳಾ ಸಾಹಿತ್ಯದ ಇತಿಹಾಸದ ಆರಂಭದ ಕಾಲ. ವಸಾಹತುಶಾಹಿಯ ಪ್ರವೇಶದಿಂದಾಗಿ ಸಮಾಜದ ಎಲ್ಲ ವರ್ಗಗಳಿಗೂ ದೊರೆತ ಶಿಕ್ಷಣ, ಸುಧಾರಣಾ ಚಳುವಳಿಗಳು, ಹೊಸ ಚಿಂತನೆಗಳ ಹೋರಾಟಗಳು, ಇವುಗಳಿಂದಾಗಿ ಶೋಷಿತ ವರ್ಗಕ್ಕೆ ಅದರಲ್ಲೂ ಮಹಿಳಾ ಸಾಹಿತ್ಯ ಇತಿಹಾಸಕ್ಕೆ ಹೊಸ ಚಾಲನೆ ಬಂದಿತು. ಈ ಹಿನ್ನಲೆಯಲ್ಲಿ ೨೦ನೇ ಶತಮಾನದ ಆದಿಯಲ್ಲಿ ಮಹಿಳಾ ಸಾಹಿತ್ಯ ಕ್ಷೇತ್ರದಲ್ಲಿ ಹಲವಾರು ಮಹಿಳಾ ಸಾಹಿತಿಗಳು ಕಂಡು ಬಂದರು. ಈ ಲೇಖಕಿಯರು ತಮ್ಮ ಬರಹಗಳಲ್ಲಿ ಅಬಲೆಯರೂ, ಶೋಷಿತರೂ ಆದ ಹೆಣ್ಣುಮಕ್ಕಳ ಬಾಳಿನ ವಾಸ್ತವ ಚಿತ್ರಣವನ್ನು ಸಮಾಜದ ಮುಂದೆ ತೆರೆದಿರಿಸಿದರು. ಇವರ ಬದುಕು, ಸಾಹಿತ್ಯ ಆದರ್ಶಗಳು ಸಮಾಜಕ್ಕೆ ಮಾರ್ಗದರ್ಶಕವಾಗಿದೆ. ಇವರನ್ನೆಲ್ಲ ಕನ್ನಡ ನಾಡು ಎಂದಿಗೂ ಮರೆಯಲಾರದಂತಹ ಮಹಿಳಾ ಚೇತನಗಳು.

೨೦ನೇ ಶತಮಾನದ ಆರಂಭದಲ್ಲಿ ನಂಜನಗೂಡು ತಿರುಮಲಾಂಬರು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪ್ರಮುಖರು. ಇವರ ಕಾದಂಬರಿಗಳಾದ 'ಸುಶೀಲೆ', 'ವಿದ್ಯುಲ್ಲತಾ', 'ನಭಾ',. 'ಮಾತೃನಂದಿನಿ', ಕೃತಿಗಳಲ್ಲಿ ವಿಧವಾ ಸಮಸ್ಯೆ, ಸಮಾಜದ ತಪ್ಪು ಗ್ರಹಿಕೆಗಳು, ಸಂಶಯ, ಭೀತಿ, ಬಾಲ್ಯವಿವಾಹದ ನಿರಾಕರಣೆ, ಸ್ತ್ರೀ ವಿದ್ಯಾಭ್ಯಾಸಕ್ಕೆ ಆದ್ಯತೆ ನೀಡಿರುವುದು ಪ್ರಮುಖ ವಿಷಯವಾಗಿದೆ.

ಇವರ ನಂತರ ಆರ್. ಕಲ್ಯಾಣಮ್ಮ ನವರು ವಿಧವಾ ಪುನರ್ವಿವಾಹದ ಆದರ್ಶವನ್ನು ಹೊಂದಿದ ಕಾದಂಬರಿ 'ನಿರ್ಭಾಗ್ಯವನಿತೆ', ಶ್ಯಾಮಲಾದೇವಿ ಬೆಳಗಾಂವ್‌ಕರ್ ರವರು ಬಾಲವಿಧವೆ, ವಿಧವಾ ವಿವಾಹದಂತಹ ಸಮಸ್ಯೆಗಳನ್ನು ಬಿಟ್ಟು, ವೈಶ್ಯಾ ಜೀವನದ ಸಮಸ್ಯೆ, ವರದಕ್ಷಿಣೆ ಸಮಸ್ಯೆಗಳನ್ನು ಕುರಿತು ಬರೆದಿದ್ದಾರೆ.

ನವೋದಯ ಕಾವ್ಯ ಮೀಮಾಂಸೆಯ ರಮ್ಯತೆಯ ಆಯಾಮಕ್ಕಿಂತ ಭಿನ್ನವಾದ ವೈಚಾರಿಕತೆ, ಸಾಮಾಜಿಕ ಚಿಂತನಾ ವಿನ್ಯಾಸವನ್ನು ಲೇಖಕಿಯರು ಕಟ್ಟಿಕೊಂಡರು. ಸ್ತ್ರೀ ಹಾಗೂ ಪುರುಷ ಲಿಂಗತ್ವಗಳ

ನಡುವಿನ ಸಂಬಂಧವನ್ನು ಭಾವುಕ ಸಾಂಸ್ಕೃತಿಕ ನೆಲೆಯಲ್ಲಿ ಅರ್ಥೈಸಿಕೊಳ್ಳುವತ್ತ ಅವರ ಒಲವು ಇರಲಿಲ್ಲ. ಜಾಗತಿಕ ಮಹಿಳಾ ಆಂದೋಲನಗಳ ತಿಳುವಳಿಕೆಗಳ ಹಿನ್ನಲೆಯಲ್ಲಿ ಮಹಿಳಾ ಸಮಸ್ಯೆಗಳನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸುವ ಯತ್ನವು ಮೊದಲಾಯಿತು. ತ್ರಿವೇಣಿ, ಎಂ.ಕೆ.ಇಂದಿರಾ, ಅನುಪಮಾ ನಿರಂಜನ ಇನ್ನೂ ಮುಂತಾದ ಲೇಖಕಿಯರು ತಮ್ಮ ಕೃತಿಗಳಲ್ಲಿ ಸವಾಲೆಸೆಯುವ ತಿರಸ್ಕಾರ ಹಾಗೂ ನಿರ್ಲಕ್ಷ್ಯದಿಂದ ಪ್ರತಿಕ್ರಿಯಿಸುವ ನಾಯಕಿಯರು ಸೃಷ್ಟಿಯಾದರು. ಕ್ರೌರ್ಯ, ದಮನ, ಅವಮಾನಗಳನ್ನುಂಡು ನೋವು ಸಂಕಟಗಳಿಗೊಳಗಾಗುವ ಕಥನಗಳು ಸೃಷ್ಟಿಯಾದವು.

ತ್ರಿವೇಣಿಯವರ 'ಅಪಸ್ವರ' ಕಾದಂಬರಿಯಲ್ಲಿ ನಾಯಕಿ ಆಧುನಿಕ ಪ್ರಜ್ಞೆಯನ್ನು ಉಳ್ಳಂತ ವಸ್ತು ಚಿತ್ರಣವಿದೆ. 'ಕೀಲುಗೊಂಬೆ' ಕಾದಂಬರಿಯಲ್ಲಿ ಅಶಿಕ್ಷಿತ ಹೆಣ್ಣುಗಳು ಆರ್ಥಿಕ ಸ್ವಾತಂತ್ರ್ಯವಿಲ್ಲದ ಕಾರಣ ಶೋಷಣೆಗೆ ಗುರಿಯಾಗುವ ಸಮಸ್ಯೆಗಳನ್ನು ಚಿತ್ರಿಸಿದ್ದಾರೆ. 'ಹೂವು–ಹಣ್ಣು' ಕಾದಂಬರಿಯಲ್ಲಿ ವೇಶ್ಯಾ ಚಿತ್ರಿತ ಕಥೆಯ ವಸ್ತು, 'ಮುಕ್ತಿ' ಮತ್ತು 'ಕಂಕಣ' ಕಾದಂಬರಿಗಳಲ್ಲಿ ಹೆಣ್ಣಿನ ಸಮಸ್ಯೆಗಳನ್ನು ಚಿತ್ರಿಸಿದ್ದಾರೆ.

ಕಾದಂಬರಿ ಪ್ರಕಾರದ ನೇರ ನಿರೂಪಣೆಯ ಗತಿಯನ್ನೇ ಬಳಸಿಕೊಂಡು ನೇರ ಪ್ರತಿಭಟನೆಯ ತಾತ್ವಿಕ ನಿಲುವುಗಳನ್ನು ಹೊಂದಿರುವ ಪೌರಾಣಿಕ ಕಥಾಪರಂಪರೆಯನ್ನು ಎಚ್.ವಿ. ಸಾವಿತ್ರಮ್ಮ ನವರ 'ಸೀತೆ–ರಾಮ–ಲಕ್ಷ್ಮಣ', 'ವಿಮುಕ್ತಿ' ಹಾಗೂ ಅನುಪಮಾ ನಿರಂಜನರವರ 'ಮಾಧವಿ' ಕೃತಿಗಳು ದಮನಕ್ಕೊಳಗಾದ ಸ್ತ್ರೀಯರ ದನಿಯನ್ನು ಎತ್ತಿ ಹಿಡಿಯುತ್ತವೆ.

ಎಂ.ಕೆ. ಇಂದಿರಾ ಅವರ 'ಗೆಜ್ಜೆಪೂಜೆ' ಧರ್ಮದ ಹೆಸರಿನಲ್ಲಿ ವೇಶ್ಯಾವೃತ್ತಿಯ ಚಿತ್ರಣ ಅನಾವರಣಗೊಂಡಿರುವುದನ್ನು ಕಾಣುತ್ತೇವೆ. ಎಂ.ಕೆ. ಇಂದಿರಾ ಅವರ ಫಣಿಯಮ್ಮ ಹಲವಾರು ದೃಷ್ಟಿಗಳಿಂದ ಮಹತ್ವದ ಕೃತಿಯಾಗಿದೆ. ಫಣಿಯಮ್ಮ ಒಬ್ಬ ಅನಾಮಧೇಯ ವಿಧವೆಯ ಕೃತಿ. ಒಬ್ಬ ವಿಧವೆಯ ನೋವು, ಸಾಮಾಜಿಕವಾಗಿ ನಿಂದನೆಗೆ ಒಳಪಡುವ ಹಾಗೂ ಸಾಂಪ್ರದಾಯಿಕವಾಗಿ, ಸಾಂಸ್ಕೃತಿಕವಾಗಿ ದೂಷಿಸಲ್ಪಟ್ಟಿರುವ ಒಂದು ಹೆಣ್ಣಿನ ಕಥೆಯಾಗಿದೆ.

ಕನ್ನಡ ನವ್ಯ ಮತ್ತು ದಲಿತ – ಬಂಡಾಯ ಸಾಹಿತ್ಯ ಸಿದ್ಧಾಂತಗಳು ಸಾಹಿತ್ಯಕ್ಕಿಂತ ಹೆಚ್ಚಿನ ಪ್ರೇರಣೆಯನ್ನು ಮಹಿಳಾ ಸಾಹಿತ್ಯದ ಮೇಲೆ ಬೀರಿವೆ. ನವ್ಯರ ಅಸ್ತಿತ್ವವಾದಿ ಚಿಂತನೆಗಳು ಒಂದು ಬಗೆಯ ಅಂತರ್ಯಾನದ ಮೂಲಕವೇ ಹೊರ ಜಗತ್ತಿನ ಸಾಕ್ಷಾತ್ಕಾರವನ್ನು ಮಾಡಿಕೊಳ್ಳುವ ಕ್ರಮವನ್ನು ಸಾಹಿತ್ಯಾಭಿವ್ಯಕ್ತಿಯಲ್ಲಿ ಹುಟ್ಟು ಹಾಕಿದವು. ದಲಿತ – ಬಂಡಾಯ ಚಿಂತನೆಗಳು ಸಮಾಜ ಕೇಂದ್ರಿತ ಗ್ರಹಿಕೆಯ ಮೂಲಕ ಸಮುದಾಯ ಪ್ರಜ್ಞೆಯ ಅವಿನಾಭಾಗವಾಗಿ ತನ್ನನ್ನು ಗುರುತಿಸಿಕೊಳ್ಳಲು ಲೇಖಕಿಯರಿಗೆ ಪ್ರೇರಣೆಯೊದಗಿಸಿತು.

ವೀಣಾ ಶಾಂತೇಶ್ವರರ ಕೃತಿಗಳಲ್ಲಿ ಶೋಷಣೆ ಬಂಡಾಯ ಇತ್ಯಾದಿ ಕಥಾ ವಸ್ತುಗಳನ್ನು ಕಾಣಬಹುದು.

ಸಮಾಜದ ಅಲ್ಪ ಸಂಖ್ಯಾತ ಕೋಮಿನ ಹಾಗೂ ದಲಿತವರ್ಗದ ಸಂವೇದನೆಗಳನ್ನು ಬಿ.ಟಿ. ಲಲಿತಾ ನಾಯಕ್, ಸಾರಾ ಅಬೂಬಕರ್, ಭಾನು ಮುಷ್ತಕ್, ಮಲ್ಲಿಕಾ ಘಂಟಿ, ನಾಗವೇಣಿ ಎಚ್. ಗೀತಾ ನಾಗಭೂಷಣ ಮುಂತಾದ ಲೇಖಕಿಯರು ತಮ್ಮ ಕೃತಿಗಳಲ್ಲಿ ಒಡಮೂಡಿಸಿದ್ದಾರೆ. ಬಿ.ಟಿ. ಲಲಿತಾ ನಾಯಕ್‌ರ ಕಾದಂಬರಿಗಳಾದ 'ನಂ. ರೂಪ್ಲಿ', 'ಚಂದ್ರ ಪರಾಭವ', 'ನೆಲೆ ಬೆಲೆ', 'ಗತಿ', ಕೃತಿಗಳಲ್ಲಿ ಲಂಬಾಣಿ ಜನಾಂಗದ ವಿಶಿಷ್ಟ ಸಂಸ್ಕೃತಿ, ದುರ್ಬಲ ವರ್ಗದ ಮಹಿಳೆಯರ ಚಿತ್ರಣವಿದೆ.

ಮುಸ್ಲಿಂ ಸಮಾಜದ ಹೆಣ್ಣುಮಕ್ಕಳ ಮೇಲಾಗುವ ಶೋಷಣೆಯನ್ನು ಕೃತಿ ಮುಖೇನ ಮುಂದಿಡುವುದರ ಮೂಲಕ ಸಮಾಜದ ಗಮನವನ್ನು ಅದರೆಡೆ ಸೆಳೆದುಕೊಳ್ಳಲೆತ್ನಿಸಿದವರು ಸಾರಾ ಅಬೂಬಕರ್. ಈ ಯತ್ನದ ಮೂಲಕ ತಮ್ಮ ಕೋಮಿನ ಗಂಡಸರು ಸ್ತ್ರೀಯರ ಬಗೆಗಿನ ದೃಷ್ಟಿಯನ್ನು ಬದಲಾಯಿಸಿಕೊಳ್ಳಬಲ್ಲರೆಂಬ ಆಶಯ ಸಾರಾ ರವರದು. 'ಚಂದ್ರಗಿರಿಯ ತೀರದಲ್ಲಿ' ಕಾದಂಬರಿಯ ತಾಲಾಖ್ ಪದ್ಧತಿಯ ಅಮಾನವೀಯ ಮುಖವನ್ನು ಹೃದಯ ಸ್ಪರ್ಶಿಯಾಗಿ ಪರಿಚಯಿಸುತ್ತದೆ.

ಗುಲ್ಬರ್ಗಾ ಜಿಲ್ಲೆಯ ಗಡಸು ಗ್ರಾಮೀಣ ಭಾಷೆಯಲ್ಲಿ ಹಳ್ಳಿಯ ದಲಿತ ಹೆಣ್ಣುಮಕ್ಕಳ ಮೇಲಾಗುವ ಧಾರ್ಮಿಕ, ಆರ್ಥಿಕ, ಸಾಮಾಜಿಕ ಶೋಷಣೆಯನ್ನು ಗೀತಾ ನಾಗಭೂಷಣರ ಕಾದಂಬರಿಗಳು ವಿವರಿಸುತ್ತವೆ. 'ಮಾಪುರ ತಾಯಿಯ ಮಕ್ಕಳು', 'ಧಮ್ಮಸ್ಸು' ಕಾದಂಬರಿಗಳಲ್ಲಿ ದಲಿತ ಹೆಣ್ಣುಮಕ್ಕಳ, ಲೈಂಗಿಕ ದೌರ್ಜನ್ಯಕ್ಕೆ ಒಳಗಾದವರ ನೈಜ ಚಿತ್ರಣವಿದೆ. ಸಾಮಾಜಿಕ ಚಳುವಳಿಗಳ ಹಿನ್ನಲೆಯಲ್ಲಿ ಪ್ರತಿಭಟನೆಯ ಸ್ವರೂಪ ಪಡೆದಿರುವುದನ್ನು ಗಮನಿಸಬಹುದು.

ಪುರಾತನವಾದ ತ್ಯಾಗಮಯೀ ಸ್ತ್ರೀಯ ಮಾದರಿಗೆ ವಿರುದ್ಧವಾದ ಸ್ವಂತಿಕೆಯುಳ್ಳ, ಬೌದ್ಧಿಕ ಚಿಂತನೆಯ ಸ್ವಸಾಮರ್ಥ್ಯದ ಸ್ತ್ರೀ ಇವತ್ತಿನ ಲೇಖಕಿಯರ ಸಾಹಿತ್ಯದ ಆದರ್ಶವಾಗಿದ್ದಾಳೆ.

ಈ ಮೇಲ್ಕಂಡ ಲೇಖಕಿಯರು ಸಾಮಾಜಿಕ ಮೌಲ್ಯಗಳಿಗೆ ಸ್ತ್ರೀಯರ ಕೊಡುಗೆ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಆಕೆಯ ಸ್ಥಾನಮಾನಗಳನ್ನು ಒಂದು ನಿರ್ಧಿಷ್ಟ ಹಂತದಲ್ಲಿ ಪರಿಚಯಪಡಿಸಲು ಯತ್ನಿಸಿದ್ದಾರೆ. ಹೀಗೆ ಇವರಿಗಿಂತ ಭಿನ್ನವಾಗಿ ಕಾದಂಬರಿಗಾರ್ತಿಯಾದ ನಾಗವೇಣಿ ಎಚ್. ಸಾಹಿತ್ಯ ಲೋಕದಲ್ಲಿ ನಿಲ್ಲುತ್ತಾರೆ. ವೈದೇಹಿ, ನೇಮಿಚಂದ್ರ, ವೀಣಾ ಶಾಂತೇಶ್ವರ, ಸಾರಾ ಅಬೂಬಕರ್, ಭಾನು ಮುಷ್ತಾಕ್, ಬಿ.ಟಿ. ಲಲಿತಾ ನಾಯಕ್, ತಮ್ಮ ಕೃತಿಗಳಲ್ಲಿ ಸಮಕಾಲೀನ ಶೋಷಿತ, ದಲಿತ ಲೋಕದ,

ಸ್ತ್ರೀಯ ಬರವಣಿಗೆಗಳಲ್ಲಿ, ಒಂದು ಜನಾಂಗದ ಸಂಸ್ಕೃತಿಯ ಹಿನ್ನೆಲೆಯನ್ನು ಕುರಿತು ತಮ್ಮ ಕೃತಿಗಳಲ್ಲಿ ತಂದರೆ ಎಚ್.ನಾಗವೇಣಿಯವರು ಇವರೆಲ್ಲರಿಗಿಂತ ಭಿನ್ನವಾಗಿ ನಿಲ್ಲುತ್ತಾರೆ. ಎಚ್. ನಾಗವೇಣಿಯವರು ಕಡಲ ತೀರ ಪ್ರದೇಶದವರು. ತುಳು ನಾಡಿನ ಹೊನ್ನಕಟ್ಟೆಯವರು ಇವರು ನೋಡುವ ಲೋಕವೇ ಬೇರೆ. ಇವರ 'ಗಾಂಧಿ ಬಂದ' ಕಾದಂಬರಿಯಲ್ಲಿ ಪ್ರಾದೇಶಿಕತೆಯ ಸೊಗಡು, ಶಬ್ಧ ಶಬ್ಧಗಳಲ್ಲಿ ತುಳು ಸಂಸ್ಕೃತಿ ಉಸಿರಾಡುತ್ತಿದೆ. ಇವರ ನಿರೂಪಣೆಯ ವಿಧಾನದಲ್ಲಿ ವಸ್ತು ವಿನ್ಯಾಸದಲ್ಲಿ ಹೊಸ ಹೊಳಪಿದೆ. ಹಳ್ಳಿಯ ಶ್ರಮಿಕ ವರ್ಗದ ಶೋಷಿತ ನೆಲೆಯಲ್ಲೂ ಕಾಣಿಸಿಕೊಳ್ಳುವ ಪ್ರೀತಿ ಹಾಗೂ ಪ್ರತಿಭಟನೆಯ ಎಳೆಗಳಿವೆ. ನಾಗವೇಣಿಯವರ 'ನಾಕನೇ ನೀರು' ಕಥಾ ಸಂಗ್ರಹ ಮತ್ತು 'ಗಾಂಧಿ ಬಂದ' ಕಾದಂಬರಿಗಳಲ್ಲಿ ಕರಾವಳಿ ಶ್ರಮ ಜೀವಿಗಳ ಜಗತ್ತು ಮತ್ತು ಪ್ರಾದೇಶಿಕತೆಯ ಚಿತ್ರಣವನ್ನು ಕಾಣುತ್ತೇವೆ. 'ಗಾಂಧಿ ಬಂದ' ಕಾದಂಬರಿಯನ್ನು ಲೇಖಕಿ ತುಳುನಾಡಿನಿಂದ ದೂರವಿದ್ದುಕೊಂಡು ಬರೆದರು ಎನ್ನುವುದು ಮುಖ್ಯವಾಗಿ ಕಾಣುತ್ತದೆ. ನಾಗವೇಣಿಯವರು ಪರಿಸರವಾದಿ ಎನ್ನುವ ಸ್ಪಷ್ಟ ನಿಲುವು ಕಾಣುತ್ತದೆ. ನಾಗವೇಣಿಯವರು ಸಮಕಾಲೀನ ವಸ್ತು ಪ್ರಜ್ಞೆಯನ್ನು ಎತ್ತಿಕೊಳ್ಳದೇ ಒಂದು ಪ್ರಾದೇಶಿಕ ಚಿತ್ರಣಗಳನ್ನು ಕಾದಂಬರಿಯಲ್ಲಿ ತಂದಿರುವುದು ಅವರ ವೈಶಿಷ್ಟ್ಯ. ಇವರ 'ಗಾಂಧಿ ಬಂದ' ಕಾದಂಬರಿಯಲ್ಲಿ ತುಳುನಾಡಿನ ವೈವಿಧ್ಯಮಯ ಬದುಕು, ತುಳು ಸಂಸ್ಕೃತಿ ಸಾಕಷ್ಟು ಚಿತ್ರಿತವಾಗಿವೆ. ಇವರು ದೂರದಲ್ಲಿದ್ದು ರಚಿಸಿರುವುದರಿಂದ ಕಳೆದು ಹೋದ ಜಗತ್ತನ್ನು ದರ್ಶಿಸುವುದಾಗಿದೆ. ಮಂಗಳೂರು ಸುತ್ತಲಿನ ಗ್ರಾಮೀಣ ಸಾಂಸ್ಕೃತಿಕ ಜಗತ್ತು ತನ್ನೆಲ್ಲ ಚಲನ ಶೀಲತೆಯನ್ನು ಮೈಗೂಡಿಸಿಕೊಂಡಿದೆ. ತುಳುನಾಡಿನ ಕೃಷಿಯಾಧಾರಿತ ಸಂಸ್ಕೃತಿಯ ಜೀವಂತ ಚಿತ್ರಣವಿದೆ. "ಖಾಲಿ ಹಾಳೆಗಳ ಮುಂದೆ ಗಂಟೆಗಟ್ಟಲೆ ಮೈಮರೆತು, ಕುಳಿತಾಗ ಸಹಜವಾಗಿಯೇ ಮತ್ತೆ ಎದುರಾದದ್ದು ಅದೇ ನನ್ನ ತುಳುನಾಡು" ಎಂದು ಲೇಖಕಿಯೇ ಹೇಳಿದ್ದಾರೆ. ಅವರು ಪರಿಸರವನ್ನು ಹತ್ತಿರದಿಂದ ನೋಡಿದವರಾಗಿದ್ದರು.

ನಾಗವೇಣಿಯವರಲ್ಲಿ ಪರಿಸರ ಪ್ರಜ್ಞೆಯ ನಿಲುವನ್ನು ಕಾಣುತ್ತೇವೆ. ಅವರು ನಿಸರ್ಗದ ಸೌಂದರ್ಯವನ್ನು ಬಹಳ ಹತ್ತಿರದಿಂದ ಕಂಡವರಾಗಿದ್ದಾರೆ. ಅವರು ಪ್ರಾದೇಶಿಕತೆಯಲ್ಲಿ ಇರುವ ಒಂದೊಂದು ಜೀವಿಗಳಲ್ಲಿ ಅವಿನಾಭಾವ ಸಂಬಂಧವನ್ನು ಹೊಂದಿ, ಆ ನೆನಪುಗಳು ಮರುಕಳಿಸಿ ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ ಬದುಕನ್ನು, ಪರಿಸರವನ್ನು ಬರಹದ ಮೂಲಕ ತಂದಿದ್ದಾರೆ. ಈ ಕಾದಂಬರಿ ಬರೆಯಲು ಅವರು ಬೆಳೆದು ಬಂದ ಪರಿಸರವೇ ಕಾರಣವಾಗಿದೆ. ಇಂದಿನ ಕಾಲದಲ್ಲಿ ಮರೆಯುತ್ತಿರುವ ಸಂಸ್ಕೃತಿಗಳನ್ನು ಇಂದಿನ ಪೀಳಿಗೆಯವರಿಗೆ ನೆನಪಿಸುವಂತಹ ಒಂದು ಯತ್ನ ಮಾಡಿದ್ದಾರೆ. ವ್ಯವಸಾಯ ಇಲ್ಲಿಯ ಜನರ ಕಸುಬು, ಗುತ್ತಿನ ಶೆಟ್ಟರು, ಪಾಂಡು ಶೆಟ್ಟರು, ಜಾರಿಗೆ ಶೆಟ್ಟರು, ಮುಂತಾದ ಬಂಟರ

ಕುಟುಂಬಗಳು, ಹೆಬ್ಬಾರರ ಕುಟುಂಬ, ಇವರೆಲ್ಲ ಜಮೀನ್ದಾರಿಕೆಯನ್ನು ಮಾಡುತ್ತಿದ್ದರು. ಇವರ ಅವಶ್ಯಕತೆಗೆ ಬೇರೆ ಬೇರೆ ಜಾತಿಯ ಆಳುಗಳು, ಇವರೆಲ್ಲರಿಗೂ ಭಟ್ಟರು, ಇಲ್ಲಿನ ಸಾಮಾಜಿಕ ಸ್ತರಗಳನ್ನು ಪ್ರತಿನಿಧಿಸುತ್ತಾರೆ. ಈ ಪರಿಸರದ ಅವಿಭಾಜ್ಯ ಅಂಗಗಳಾದ ಕೆರೆ, ಕಟ್ಟಿಹುಣಿ, ಪಶುಗಳು, ಕಡಲು, ಗದ್ದೆ, ಆವರಣದ ಪ್ರತೀಕಗಳು, ಮೀನು ಬೇಟೆ, ವಿವಿಧ ಪಕ್ಷಿಗಳ ಹೆಸರುಗಳು, ಗದ್ದೆ ಉಳುವುದು, ಇಂಥ ಮಾನವೀಯ ವ್ಯವಹಾರಗಳಲ್ಲಿ ಈ ಪರಿಸರಕ್ಕೆ ಸಹಜವಾದ ಚಟುವಟಿಕೆಗಳು, ಕಂಬಳ, ಭೂತದ ಕೋಲ, ಕೋಳಿ ಅಂಕ, ನೂಲು ಹುಣ್ಣಿಮೆ, ಕೆಡ್ಡಸ ಹಬ್ಬ ಮುಂತಾದ ಹರಿದಿನಗಳು, ಇಂಥ ಸಾಂಸ್ಕೃತಿಕ ವಿವರಗಳು ಕಾದಂಬರಿಯಲ್ಲಿ ಕಾಣುತ್ತೇ.

ಜಾತಿ ಸಂಘರ್ಷದ ಅಲೆಯನ್ನು, ಒಕ್ಕಲಾಳುಗಳ ಮೇಲೆ ದೌರ್ಜನ್ಯವನ್ನು ಈ ಕಾದಂಬರಿಯಲ್ಲಿ ಕಾಣುತ್ತೇವೆ. ಶ್ರೀಮಂತರ, ಬಡವರ ಚಿತ್ರಣವಿದೆ. ಜಾತಿ ಜಾತಿಗಳಲ್ಲೇ ಭೇದವಿರುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಪ್ರತಿಭಟನೆಯ ಅಂಶವನ್ನು ದ್ರೌಪದಿ, ಅದ್ರಾಮ, ಮಾರಪ್ಪ ಈ ಪಾತ್ರಗಳ ಮೂಲಕ ಕಂಡು ಬರುತ್ತದೆ. ಜಾತಿ ಧರ್ಮಕ್ಕಿಂತ ಮಾನವೀಯತೆಯ ನೆಲೆಯಿರುವುದನ್ನು ಕಾಣುತ್ತೇವೆ. ಮನುಷ್ಯ ಮನುಷ್ಯನ ನಡುವೆ ಅರ್ಥಪೂರ್ಣ ಸಂಬಂಧಗಳೇರ್ಪಟ್ಟಾಗಲೇ ಸಮಾಜ ವ್ಯವಸ್ಥೆ ಸರಿಯಾಗಿರುತ್ತದೆ. ಮಾನವೀಯ ಸಂಬಂಧಗಳ ಬಿರುಕು ಜಾತಿ, ಅಂತಸ್ತು, ಅಧಿಕಾರ, ಇವೆಲ್ಲ ಕಾರಣವಾಗುತ್ತವೆ. ಮಾನವೀಯ ಭಾವಗಳ ಎಳೆಯನ್ನು ಒಕ್ಕಳಾಳುಗಳಲ್ಲಿ ಮಾರಪ್ಪ, ಅದ್ರಾಮ, ಪುಟ್ಟಮ್ಮಕ್ಕನ ಪಾತ್ರಗಳಲ್ಲಿ ಗುರುತಿಸಬಹುದು. ಈ ಕಾದಂಬರಿಯಲ್ಲಿ ಬಹುಶಿಸ್ತೀಯ ಅಧ್ಯಯನವಾಗಿ ಗುರುತಿಸಬಹುದು. ಸಾಂಸ್ಕೃತಿಕ ಮುಖಾ ಮುಖಿಯ ಮಜಲುಗಳನ್ನು ಕಾಣಬಹುದು. ನಿಸರ್ಗದ ವರ್ಣನೆಯು ನೈಜವಾಗಿ ಚಿತ್ರಿತವಾಗಿದೆ. ಅವರ ಭಾಷಾ ಶೈಲಿಯಲ್ಲಿ ಆಡು ಭಾಷೆಯ ಸೊಗಡನ್ನು ಕಾಣುತ್ತೇವೆ. ಈ ಎಲ್ಲಾ ಕಾರಣಗಳಿಂದ ಮೇಲೆ ಹೆಸರಿಸಿರುವ ಸ್ತ್ರೀ ಕೇಂದ್ರಿತ ಮಹಿಳಾ ಕಾದಂಬರಿಗಾರ್ತಿ ಯರಿಗಿಂತ ಭಿನ್ನವಾಗಿ ಎಚ್.ನಾಗವೇಣಿಯವರು ನಿಲ್ಲುತ್ತಾರೆ. ಎಚ್.ನಾಗವೇಣಿಯವರ ಸಾಹಿತ್ಯಕ ಕೊಡುಗೆಯೇನೆಂದರೆ ಸಾಂಸ್ಕೃತಿಕ ಅಧ್ಯಯನಕ್ಕೆ ಒಂದು ಪರಿಕರವಾಗಿ, ಮಹತ್ವದ ಆಕರವಾಗಿಯೂ, "ನಾಗವೇಣಿ ಅವರು ತಮ್ಮ ಕಾದಂಬರಿಯಲ್ಲಿ ಪರಿಸರ, ಸಂಪ್ರದಾಯ, ಸಂಸ್ಕೃತಿ, ಜಾತಿ ವ್ಯವಸ್ಥೆ ಮತ್ತು ಸಾಮಾಜಿಕ ವ್ಯವಸ್ಥೆಯ ಹಿನ್ನೆಲೆಯಲ್ಲಿ ಅವರು ಕೂಲಂಕಷವಾಗಿ ಪರಿಶೀಲನೆಗೆ ಒಳಪಡಿಸಿರುವುದನ್ನು ಎತ್ತಿತೋರಿಸುತ್ತದೆ ಎಂದು ಹೇಳಬಹುದು.

'ಗಾಂಧಿ ಬಂದ' ಕಾದಂಬರಿಗೆ ಬಂದ ಪ್ರಶಸ್ತಿಗಳು:

೧. ಚದುರಂಗ ಪ್ರಶಸ್ತಿ, ಚದುರಂಗ ಪ್ರತಿಷ್ಠಾನ, ಮೈಸೂರು, ೨೦೦೦ ಇಸವಿ

೨. ಎಸ್.ಎಸ್.ಭೂಸನೂರುಮಠ ಪ್ರಶಸ್ತಿ, ಧಾರವಾಡ – ೨೦೦೦ ಇಸವಿ

೩. ಕರ್ನಾಟಕ ಸಾಹಿತ್ಯ ಅಕಾಡಮಿ ಪುಸ್ತಕ ಪ್ರಶಸ್ತಿ – ಬೆಂಗಳೂರು ೨೦೦೦ ಇಸವಿ

೪. ಗೀತಾ ದೇಸಾಯಿ ಪ್ರಶಸ್ತಿ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು ೨೦೦೦ ಇಸವಿ.

# ಅಧ್ಯಾಯ – ೪

## ತುಳು ಸಂಸ್ಕೃತಿಯ ಸ್ವರೂಪ

ಕರ್ನಾಟಕ ರಾಜ್ಯದ ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳಲ್ಲಿ ಬಹುತೇಕ ಜನರ ಆಡುಮಾತು ತುಳು. ಈ ಪ್ರದೇಶಗಳು ದಟ್ಟವಾದ ಅರಣ್ಯಗಳಿಂದ ಸುತ್ತುವರಿದಿವೆ. ಅರಬ್ಬಿ ಸಮುದ್ರ ಮತ್ತು ಹಲವಾರು ನದಿಗಳಿಂದಾವೃತವಾದ ನೆಲೆ ತುಳುನಾಡು. ವಿಶಿಷ್ಟ ಸಾಮಾಜಿಕ, ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದೆ. ಈ ಪ್ರದೇಶವು ಸುಮಾರು ಎರಡು ಸಾವಿರ ವರ್ಷಗಳಿಂದ ತುಳುನಾಡು ಅಥವಾ ತುಳುವ ರಾಜ್ಯ ಎಂದು ಕರೆಸಿಕೊಂಡಿದೆ.

ತುಳುವಾರ ವಿಶಿಷ್ಟ ಸಂಪ್ರದಾಯ, ನಂಬಿಕೆ, ಮೌಲ್ಯಗಳನ್ನು ಪ್ರತಿನಿಧಿಸುವ ಮೌಖಿಕ ಪರಂಪರೆ ಪಾಡ್ದನ, ಕಬಿತ ಪ್ರಕಾರಗಳು ಗುಣಾತ್ಮಕವಾಗಿ ಮೂಡಿ ಬಂದಿವೆ. ಇಂತಹ ಮೌಖಿಕ ಸಂಪ್ರದಾಯಗಳಲ್ಲಿ ಲಿಖಿತಸಂಪ್ರದಾಯ ಪೂರ್ವದಲ್ಲಿ ನೆಲೆಗೊಂಡಿದ್ದ ತುಳುವ ಸಾಂಸ್ಕೃತಿಕ ಸಂಕೀರ್ಣವೊಂದರ ಹೊಳಹು ದೊರೆಯುವುದರಿಂದ ಸಮಕಾಲೀನ ಸಮಾಜದ ಸ್ಥಿತ್ಯಂತರದ ಒಳನೋಟಗಳು ಕಾಣುತ್ತವೆ.

ಪಾಡ್ದನಗಳ ರಚನೆ ೧೫, ೧೬, ೧೭ನೇ ಶತಮಾನಕ್ಕೆ ಸೇರಿದವುಗಳಾಗಿರುವುದ ರಿಂದ ಆ ಕಾಲದ ತುಳು ನಾಡಿನ ಜನ ಜೀವನ ಚಿತ್ರಣವು ಈ ಪಾಡ್ದನಗಳಲ್ಲಿ ದೊರೆಯುತ್ತವೆ. ಪಾಡ್ದನಗಳು ಕಥನ ಕವನಗಳ ದೃಷ್ಟಿಯಿಂದ ಅನೇಕ ಕಾಲ್ಪನಿಕ ಅಂಶಗಳನ್ನು ಒಳಗೊಂಡಿದ್ದರೂ ವಿವರಗಳಲ್ಲಿ ಮತ್ತು ವರ್ಣನೆಗಳಲ್ಲಿ ಸಂಸ್ಕೃತಿಯ ಬೇರೆ ಬೇರೆ ಮುಖಗಳನ್ನು ವಾಸ್ತವಿಕ ನೆಲೆಗಳಲ್ಲಿ ಕಾಣುತ್ತೇವೆ.

ಭೂತಗಳ ಮಹಿಮೆ ಮತ್ತು ಪ್ರಸರಣಕ್ಕೆ ಸಂಬಂಧಿಸಿದ ಪಾಡ್ದನಗಳಲ್ಲಿ ತುಳು ನಾಡಿನ ಸಂಸ್ಕೃತಿಯ ಚಿತ್ರಣಗಳು ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತವೆ. ಇಂತಹ ಪಾಡ್ದನಗಳು ಸಹಜವಾಗಿಯೇ ತುಳುನಾಡಿನ ಪರಿಸರದಲ್ಲಿ ಕ್ರಿಯಾತ್ಮಕವಾಗಿರುವುದು ಇದಕ್ಕೆ ಕಾರಣವಾಗಿದೆ.

ತುಳು ನಾಡಿನಲ್ಲಿ ಜನಪ್ರಿಯವಾಗಿರುವ ಎರಡು ಪಾಡ್ದನಗಳಾದ 'ಕೋಟಿ ಚೆನ್ನಯ್ಯ' ಮತ್ತು 'ಸಿರಿ' ಯ ಪಾಡ್ದನಗಳು ತುಳುನಾಡಿನ ಸಂಸ್ಕೃತಿಯ ಚಿತ್ರಣದ ದೃಷ್ಟಿಯಿಂದ ಬಹಳ ಮುಖ್ಯವಾಗಿವೆ, ಯಾವುದೇ ಭೂತಗಳ ಪಾಡ್ದನಗಳಲ್ಲಿ ದೊರೆಯುವುದರಿಂದ ಅಧಿಕ ಪ್ರಮಾಣದಲ್ಲಿ ಈ ಎರಡು ಪಾಡ್ದನಗಳಲ್ಲಿ ಸಂಸ್ಕೃತಿಯ ವಿವರಗಳು ದೊರೆಯುತ್ತವೆ. ಈ ಎರಡು ಪಾಡ್ದನಗಳ ವಸ್ತು ತುಳುನಾಡಿನ ಎರಡು ಸಾಮಾಜಿಕ ಗುಂಪುಗಳಾದ ಬಿಲ್ಲವ ಮತ್ತು ಬಂಟರ ಸಮಾಜಗಳಿಗೆ ಸಂಬಂಧಪಟ್ಟಿದೆ. ಈ ಎರಡೂ

ಪಾಡ್ದನಗಳು ಘಟನಾ ಪರಂಪರೆಗಳಿಂದ ಕೂಡಿಕೊಂಡು ದೀರ್ಘವಾಗಿ ಬೆಳೆದು ಜನಪದ ಮಹಾಕಾವ್ಯಗಳ ಸ್ವರೂಪವನ್ನು ಪಡೆದಿವೆ.

ಪಾಡ್ದನಗಳ ಅಧ್ಯಯನದಿಂದ ಭೂತಗಳ ಉಗಮವನ್ನು ಪರಿಶೀಲಿಸಿದಾಗ ಹೆಚ್ಚಿನ ಭೂತಗಳು ಅಕಾಲ ಮರಣವನ್ನು ಹೊಂದಿದ ಮನುಷ್ಯರ ರೂಪಾಂತರ ಎನ್ನುವ ಸಂಗತಿ ತಿಳಿಯುತ್ತದೆ. ಬೇರೆ ಬೇರೆ ಕಾರಣದಿಂದ ಅಕಾಲ ಮರಣವನ್ನಪ್ಪಿದ ವ್ಯಕ್ತಿಗಳು ಭೂತಗಳಾಗಿ ಮಾರ್ಪಟ್ಟು ಆರಾಧನೆಯನ್ನು ಪಡೆಯುವ ದೈವಗಳಾಗಿ ಕಾಣಿಸಿಕೊಳ್ಳುತ್ತಾರೆ.

ತುಳು ಜನಪದ ಸಾಹಿತ್ಯದ ಗೀತ ಸಂಪ್ರದಾಯದಲ್ಲಿ 'ಪಾಡ್ದನಗಳು' ಪ್ರಧಾನವಾದುವು. ಭೂತಗಳಿಗೆ ಸಂಬಂಧಿಸಿದಂತೆ ಪಾಡ್ದನಗಳನ್ನು ಆಯಾ ಭೂತಗಳ ಉತ್ಸವ ನೇಮ, ಕೋಲ, ಆಯನ, ಮೆಚ್ಚ, ಮೈಮ, ಧರ್ಮ ನೇಮಗಳ ಸಂದರ್ಭದಲ್ಲಿ ಹಾಡುತ್ತಾರೆ. ಭೂತವನ್ನು ಕಟ್ಟುವವನು[೧] ವೇಷ ಹಾಕುವವನು, ಮೇಷ ಹಾಕಲು ಕುಳಿತಾಗ(೨) ಅವನ ಮನೆಯ ಹೆಂಗಸೊಬ್ಬಳು ತಂಬರ(೩) ಯನ್ನು ಬಡಿಯುತ್ತಾಳೆ" ಅವಳು ಪಾಡ್ದನದ ಮುಂದಿನ ಸಾಲನ್ನು ಹೇಳುತ್ತಾಳೆ. ಭೂತಕಟ್ಟುವವನು ವೇಷಧಾರಿ ಆ ಪಾಡ್ದನದ ಮುಂದಿನ ಸಾಲನ್ನು ಹೇಳುತ್ತಾನೆ. ಮತ್ತೆ ಒಂದು ಸಾಲನ್ನು ಅವಳು ಹಾಡುತ್ತಾಳೆ. ಈ ರೀತಿ ಅವರಿಬ್ಬರೂ ಒಂದರ ಬಳಿಕ ಒಂದು ಸಾಲುಗಳನ್ನು ರಾಗ ಬದ್ಧವಾಗಿ ಹಾಡುತ್ತಾರೆ.

'ಪಾಡ್ದನ' ಗಳನ್ನು ಹೊಲಗಳಲ್ಲಿ ನೇಜಿ ತೆಗೆಯುವಾಗ ಹಾಡುತ್ತಾರೆ. ನೇಜಿ ತೆಗೆಯಯುವಾಗ ಆ ಕೆಲಸ ಮಾಡುವಾಗ ಹೆಂಗಸರ ಗುಂಪಿನಲ್ಲಿ ಒಬ್ಬಳು ಅಥವಾ ಇಬ್ಬರು ಮಾತ್ರ ಪಾಡ್ದನಗಳನ್ನು ಹಾಡುತ್ತಾರೆ. ಆಯಾಸ ಪರಿಹಾರಕ್ಕಾಗಿ, ಮನರಂಜನೆಗಾಗಿ ಪಾಡ್ದನಗಳನ್ನು ಹಾಡುತ್ತಾರೆ.

'ಕಬಿತಗಳು' ತುಳು ಜನಪದ ಸಾಹಿತ್ಯದ ಕೆಲಸದ ಹಾಡುಗಳಲ್ಲಿ ಒಂದು ಪ್ರಮುಖ ಪ್ರಕಾರಕ್ಕೆ ಸೇರುತ್ತವೆ. 'ಕವಿತ' ಎನ್ನುವುದರಿಂದ 'ಕಬಿತ' ಎಂದು ಆಗಿದೆ. ಓ ಬೇ ಲೇ ಅತ್ಯಂತ ಜನಪ್ರಿಯವಾದ ಹಾಗೂ ಸಾರ್ವತ್ರಿಕವಾಗಿ ಲಭ್ಯವಾಗುವ ಕಬಿತ – ಓ ಬೇಲೆ ಓ, ಬೀಲೇ.

ಉದಾ: ಬೊಬ್ಬರ್ಯ, ಕಲ್ಕುಡ – ಕಲ್ಲುರ್ಟಿ, ಕೋಟೆ – ಚನ್ನಯ್ಯ ಕಾಂತಾಬಾರೆ, ಬೂದಾಬಾರೆ, ಕೊರಗ – ತನಿಯೆ, ಕೋಡ್ದಬ್ಬು, ತನ್ನಮಾನಿಗ ಸೊನ್ನೆ, ಗಿಂಡೆ, ಅಬ್ಬುಗೆ ದಾರೆಗೆ ಇತ್ಯಾದಿ ಭೂತಗಳೆಲ್ಲಾ ಬೇರೆ ಬೇರೆ ಕಾರಣದಿಂದಾಗಿ ಅಕಾಲ ಮರಣವನ್ನು ಹೊಂದಿದ ಮಾನವ ವ್ಯಕ್ತಿಗಳು, ಜನಪ್ರಿಯತೆ ಮತ್ತು ಪ್ರಾದೇಶಿಕ ವ್ಯಾಪ್ತಿಯ ದೃಷ್ಟಿಯಿಂದ ಕೋಟೆ-ಚೆನ್ನಯ್ಯ, 'ಸಿರಿ' ಮತ್ತು ಕಲ್ಕುಡ – ಕಲ್ಕುರ್ಟಿ ಪಾಡ್ದನಗಳು ತುಳುನಾಡಿನಲ್ಲಿ ಬಹಳ ಪ್ರಸಿದ್ಧವಾಗಿವೆ.

ತುಳುನಾಡಿನಲ್ಲಿ ವಿಭಿನ್ನ ಭಾಷೆಗಳನ್ನು ಆಡುವ ಜನರಿದ್ದಾರೆ, ಹಾಗೆಯೇ ವಿಭಿನ್ನ ಜಾತಿ, ಧರ್ಮ, ಪಂಗಡಗಳಿಗೆ ಸೇರಿದ ಜನರು ಕಾಣಿಸುತ್ತಾರೆ. ಇಲ್ಲಿನ ಪ್ರಧಾನ ಕಸುಬು ಬೇಸಾಯ, ಬತ್ತ, ತೆಂಗು ಮುಂತಾದ ಆಹಾರ ಬೆಳೆಗಳ ಜೊತೆಗೆ ಅಡಿಕೆಯಂತಹ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ. ಸಾಂಪ್ರದಾಯಿಕವಾಗಿ ಜೈನರು ಮತ್ತು ಬಂಟರು ಈ ವೃತ್ತಿಯನ್ನು ಮಾಡುತ್ತಿದ್ದರು. ತಾಳೆ ಮರಗಳಿಂದ ಹೆಂಡವನ್ನು ಇಳಿಸುವುದು ಮತ್ತು ಅದರಿಂದ ಬೆಲ್ಲವನ್ನು ತಯಾರಿಸುವುದು ಇಲ್ಲಿನ ಇನ್ನೊಂದು ಮುಖ್ಯ ಕಸುಬು. ಈ ವೃತ್ತಿಯನ್ನು ಮಾಡುವುದು ಬಿಲ್ಲವ ವರ್ಗಕ್ಕೆ ಸೇರಿದವರು. ಸಮುದ್ರದ ಕರಾವಳಿಯಲ್ಲಿ ಮೀನುಗಾರಿಕೆಯನ್ನು ಪ್ರಧಾನ ಕಸುಬನ್ನಾಗಿ ಮಾಡಿಕೊಂಡಿರುವವರು ಮೊಗವೀರರು. ವ್ಯಾಪಾರವನ್ನು ಮಾಡುವವರು ಮುಸಲ್ಮಾನರು [ಇವರು ವ್ಯಾಪಾರಿಗಳಾಗಿರುವುದರಿಂದ 'ಬ್ಯಾರಿ' ಎಂದು ಕರೆಯುತ್ತಾರೆ]. ಕೊಂಕಣಿಗರು ಇದ್ದಾರೆ. ಸಾಂಪ್ರದಾಯಿಕವಾಗಿ ಧಾರ್ಮಿಕ ಕಾರ್ಯವನ್ನು ಮಾಡುವ ಬ್ರಾಹ್ಮಣರಿದ್ದಾರೆ. ಹರಿಜನ ವರ್ಗಕ್ಕೆ ಸೇರಿದ ಅನೇಕ ಉಪಪಂಗಡಗಳಿವೆ.

ಧಾರ್ಮಿಕವಾಗಿ ಈ ಜಿಲ್ಲೆಯಲ್ಲಿ ಶೈವ, ವೈಷ್ಣವ, ಜೈನ, ಧರ್ಮಗಳು ಸಮಾಜಿಕ ಮತ್ತು ಐತಿಹಾಸಿಕ ದೃಷ್ಟಿಯಿಂದ ಪ್ರಸಿದ್ಧವಾಗಿವೆ. ಆದರೆ ಸ್ಥಳೀಯವಾಗಿ ನಾಗಾರಾಧನೆ ಮತ್ತು ಭೂತಾರಾಧನೆ ಹೆಚ್ಚು ಜನಪ್ರಿಯವಾಗಿವೆ. ನಾಗಾರಾಧನೆಗೆ ಸಂಬಂಧಪಟ್ಟಂತೆ ನಾಗಮಂಡಲ, ಭೂತರಾಧನೆಗೆ ಸಂಬಂಧಪಟ್ಟಂತೆ ಬೇರೆ ಬೇರೆ ಭೂತಗಳ ಕೋಲ, ನೇಮ, ಧರ್ಮ, ಮಹಿಮೆ ಮುಂತಾದ ಉತ್ಸವಗಳು ಈ ಜಿಲ್ಲೆಯಾದ್ಯಂತ ಜರುಗುತ್ತವೆ.

ಜನಪದ ರಂಗಭೂಮಿಯ ದೃಷ್ಟಿಯಿಂದ ಸಾಮಾನ್ಯ ಜನರಿಗೆ ಮನೋರಂಜನೆ ಯನ್ನು ಒದಗಿಸುತ್ತಿರುವುದು ಯಕ್ಷಗಾನ, ಬಯಲಾಟ, ಸಾಹಿತ್ಯ, ನೃತ್ಯ, ಅಭಿನಯ, ವೇಷ ಭೂಷಣಗಳು ಇವುಗಳಿಂದ ಕೂಡಿಕೊಂಡಿರುವ ಸಮಷ್ಟಿ ಕಲೆಯಾದ ಯಕ್ಷಗಾನ ಈ ಜಿಲ್ಲೆಯ ಪಂಡಿತ ಪಾಮರರಿಗೆ ಅಚ್ಚು ಮೆಚ್ಚಿನ ಕಲಾ ಮಾಧ್ಯಮ, ಕಾಸರಗೋಡಿನಿಂದ ಉಡುಪಿಯವರೆಗಿನ ಯಕ್ಷಗಾನದ ರೂಪವನ್ನು 'ತೆಂಕತಿಟ್ಟು' ಎಂದೂ ಉಡುಪಿಯಿಂದ ಕುಂದಾಪುರವರೆಗಿನ ಯಕ್ಷಗಾನದ ರೂಪವನ್ನು 'ಬಡಗತಿಟ್ಟು' ಎಂದೂ ಕರೆಯುತ್ತಾರೆ.

ತುಳುನಾಡಿನಲ್ಲಿ ಪ್ರಾಚೀನ ಕಾಲದಿಂದಲೂ ಕೆಲವು ಜನಪದ ವಿನೋದಗಳು ಜನಜೀವನದಲ್ಲಿ ಹಾಸು ಹೊಕ್ಕಾಗಿ ಬಂದಿವೆ. ಕಂಬಳ, ಕೋಳಿ ಅಂಕ, ಮೊಸರು ಕುಡಿಕೆ, ಚೆಂಡಿನ ಉತ್ಸವ, ತೆಂಗಿನಕಾಯಿ ಆಟ, ಬಾಲೆ ಸಾಂತು, ಪುರುಪುರು ಕಟ್ಟುವುದು, ತಪ್ಪಂಗಾಯಿ, ಗೇರು ಬೀಜದ ಆಟ ಮುಂತಾದವು ಪ್ರಮುಖವಾದ ಮನೋರಂಜಕ ಕ್ರೀಡೆಗಳು.

ಜನಪದ ಕುಣಿತಗಳು ತಮ್ಮ ವೈವಿಧ್ಯಗಳ ಮೂಲಕ ಕಾಣಿಸಿಕೊಳ್ಳುತ್ತವೆ. ನಲ್ಕೆಯರ ನಲಿಯುವಿಕೆ, ಗುಡಿಯರ ಕುಣಿತ, ರಾಣಿಯರ ಕೋಲಾಟ, ಕೆಲವು ಸಾಮೂಹಿಕ ಮತ್ತು ಸರಳ ಕುಣಿತಗಳು ಒಳ್ಳೆಯ ಮನೋರಂಜನೆಗಳನ್ನು ಒದಗಿಸುತ್ತವೆ. ಆಟಿ ಅಥವಾ ಆಷಾಢ ತಿಂಗಳಲ್ಲಿ ನಲ್ಕೆಯವರು ಆಟಿ ಕಳಂಜನ ವೇಷ ಹಾಕಿ, ಮನೆ ಮನೆಗೆ ಹೋಗಿ ಕುಣಿಯುತ್ತಾರೆ.

ಸೋಣ ಅಥವಾ ಶ್ರಾವಣ ತಿಂಗಳಲ್ಲಿ ನಲ್ಕೆಯರ ಹೆಣ್ಣುಗಳು ಮಾದಿರ ವೇಷ ಹಾಕಿ ಅಲಂಕರಿಸಿಕೊಂಡು ತೆಂಬರೆಯನ್ನು ಬಡಿಯುತ್ತಾ ಮನೆ ಮನೆಗೆ ಹೋಗಿ ಹಾಡಿ ಕುಣಿಯುತ್ತಾರೆ.

ಕರಾವಳಿಯದು ಮುಖ್ಯವಾಗಿ ಮಾತೃಪ್ರಧಾನ ಸಂಸ್ಕೃತಿ. ಅಲ್ಲಿನ ಎಲ್ಲ ಮೂಲವಾಸಿ ಜಾತಿ ಮತ್ತು ಬುಡಕಟ್ಟುಗಳು ಇಂದಿಗೂ ಮಾತೃರೂಪಿಯಾಗಿವೆ. ಇಲ್ಲಿನ ಪಿತೃಪ್ರಧಾನ ವ್ಯವಸ್ಥೆ ಉಳ್ಳ ಬ್ರಾಹ್ಮಣ ಜಾತಿ ಮತ್ತು ಉಪಜಾತಿಗಳ ಸಾಂಸ್ಕೃತಿಕ ಒಳರಚನೆಗಳಲ್ಲಿ ಮಾತೃ ಪ್ರಧಾನವಾದ ಲಕ್ಷಣಗಳು ಕಾಣಿಸುತ್ತವೆ. ಮಾತೃಪ್ರಧಾನ ವ್ಯವಸ್ಥೆ ಎಂದರೆ ಸ್ತ್ರೀ ಪ್ರಧಾನವಾದ ಒಂದು ಸಾಮಾಜಿಕ ಏರ್ಪಾಡು, ಈ ಸಂಸ್ಕೃತಿಯನ್ನು 'ತಾಯಾಳಿಕೆ' [ಕನ್ನಡ] 'ಪೊಣ್ಣಾಳ್ಮೆ' [ತುಳು] ಪದ್ಧತಿ ಎಂದು ಗುರುತಿಸಿದ್ದಾರೆ.

ತುಳುನಾಡಿನ ಅನೇಕ ಜನಾಂಗಗಳು ಕೌಟುಂಬಿಕವಾಗಿ ಇತ್ತೀಚಿನವರೆಗೆ ಅಳಿಯ ಸಂತಾನ ಪದ್ಧತಿಯನ್ನು ಅನುಸರಿಸುತ್ತಿತ್ತು. ತುಳು ಜನಪದ ಸಾಹಿತ್ಯದ ಕೆಲವು ಪ್ರಕಾರಗಳಲ್ಲಿ ಇದರ ಉಲ್ಲೇಖವಿರುವುದನ್ನು ಕಾಣುತ್ತೇವೆ. ಸೋದರ ಮಾವನ ಆಸ್ತಿಗೆ ಅಳಿಯನು ಹಕ್ಕುದಾರನಾಗಿರುವುದು ಈ ನಿಯಮದ ಪ್ರಮುಖ ಲಕ್ಷಣ. ಮಾತೃ ಪ್ರಧಾನವಾದ ಕುಟುಂಬಗಳು ಭಾರತದ ಮತ್ತು ವಿದೇಶಗಳ ಅನೇಕ ಕಡೆಗಳಲ್ಲಿ ಕಾಣಿಸುತ್ತವೆ. ಅಳಿಯ ಸಂತಾನ ಕಟ್ಟಿನ ಮೂಲಕ್ಕೆ ಸಂಬಂಧಿಸಿದಂತೆ ಭೂತಾಳ ಪಾಂಡ್ಯನನ್ನು ಕುರಿತ ಒಂದು ಐತಿಹ್ಯವಿದೆ. ಈ ಪದ್ಧತಿ ವಿಜಯನಗರದ ಆಳ್ವಿಕೆಯ ಕಾಲದಲ್ಲಿ ಕಂಡು ಬರುತ್ತದೆ. ಆ ಕಾಲದ ಕೆಲವು ಜೈನಧರ್ಮದ ಅರಸು ಮನೆತನದಲ್ಲಿ ಈ ಪದ್ಧತಿ ಕಂಡು ಬರುತ್ತದೆ. ಈ ಅಳಿಯ ಸಂತಾನ ಪದ್ಧತಿಯು ಸಾಮಾಜಿಕ ಹಿನ್ನೆಲೆಯಲ್ಲಿ ಮಾತೃ ಪ್ರಧಾನ ಪದ್ಧತಿಯ ಒಂದು ರೂಪವೆನ್ನಬಹುದು. ಅಳಿಯ ಸಂತಾನ ಪದ್ಧತಿಯನ್ನು ಅನುಸರಿಸುವವರು ತುಳುವರು, ಮಲವರು, ನಾಯಮ್ಮಾರರು, ಮಾ ಸಾಧಿಕ ಜೈನರು, ಹರಿಶೆಟ್ಟಿ, ಪರಿಯರು, ಕಂಬಾರರು, ದೇವಾಡಿಗರು, ಸಾಲಿಯ, ಮಲೆಕುಡಿಯ, ಪಂಚಾಲ, ಕ್ಷೌರಿಕ, ಅಗಸ, ಹಳೆಪೈಕ, ಮುಂಡಾಲ, ಹೊಲೆಯ ಇತ್ಯಾದಿ ವರ್ಗದವರು.

ತುಳುನಾಡಿನ ಪ್ರಾಚೀನವಾದ ಹೆಚ್ಚಿನ ಜನಾಂಗಗಳು ಒಂದೊಂದು ನಿರ್ದಿಷ್ಟ ಕಸುಬನ್ನು ಮಾಡುವ ಸಾಮಾಜಿಕ ಗುಂಪುಗಳಾಗಿ ಕಾಣಿಸಿಕೊಳ್ಳುತ್ತವೆ. ಮುಂದೆ ಇದೇ ಜನಾಂಗಗಳು ಜಾತಿಗಳ ರೂಪದಲ್ಲಿ ಕಾಣಿಸಿಕೊಳ್ಳುತ್ತವೆ. ಇಲ್ಲಿ ಹೆಚ್ಚಿನ ಗುಂಪುಗಳೆಲ್ಲಾ ಇಂದಿಗೂ ತುಳು ನಾಡಿನ ಸಮಾಜದಲ್ಲಿ

ಇರುವುವು. ವೃತ್ತಿಗಳ ದೃಷ್ಟಿಯಿಂದ ಸಾಂಪ್ರದಾಯಿಕ ಸ್ವರೂಪ ಹೊರಟು ಹೋಗಿ ಆಧುನಿಕ ಸಮಾಜಗಳ ಹಾಗೆಯೇ ಜಾತಿ ಮತ್ತು ಕಸುಬುಗಳ ನಡುವೆ ಸ್ಪಷ್ಟವಾದ ಸಂಬಂಧಗಳು ಕಾಣಿಸುವುದಿಲ್ಲ.

ಪಾಡ್ದನಗಳಲ್ಲಿ ಬ್ರಾಹ್ಮಣ ಸಮಾಜ ಧಾರ್ಮಿಕ, ಕಸುಬಿಗೆ ಸಂಬಂಧಿಸಿದಂತೆ ಚಿತ್ರಿತವಾಗಿದೆ. ಭೂತಾರಾಧನೆಗೆ ಸಂಬಂಧಿಸಿದ ಭೂತದ ಮಹಿಮೆಯನ್ನು ಹೇಳುವ ಎಲ್ಲಾ ಪಾಡ್ದನಗಳಲ್ಲಿ ಬ್ರಾಹ್ಮಣರು 'ಬಲ್ಮೆಯ' ಭಟ್ಟರಾಗಿ, ಪಂಚಾಗ ನೋಡುವ ಭಟ್ಟರಾಗಿ, ಪ್ರಶ್ನೆಯ ರೂಪದ ಭವಿಷ್ಯ ಹೇಳುವ ಭಟ್ಟರಾಗಿ ಭೂತದ ಸ್ಥಾನದ ನಿರ್ಮಾಣದಲ್ಲಿ ಎಲ್ಲಾ ಧಾರ್ಮಿಕ ವಿಧಿಗಳನ್ನು ನಡೆಸಿಕೊಡುವ ಆಚರಣೆಯ ಭಟ್ಟರಾಗಿ ಕಂಡುಬರುತ್ತಾರೆ.

ತುಳುನಾಡಿನ ಪ್ರತಿಷ್ಠಿತ ಮನೆತನವಾದ ಬಂಟ ಸಮಾಜದ ಬಗ್ಗೆ ಸಮಗ್ರವಾಗಿ ಸಿರಿ ಪಾಡ್ದನದಲ್ಲಿ ಬರುತ್ತದೆ. ಕೋಟಿ – ಚೆನ್ನಯ್ಯ, ಜುಮಾದಿ ಮುಂತಾದ ಪಾಡ್ದನಗಳಲ್ಲಿಯೂ ಬಂಟ ಸಮಾಜದ ಉಲ್ಲೇಖವನ್ನು ಕಾಣಬಹುದು. ಬಂಟರನ್ನು 'ಬಾರಕರು' ಎಂದು ಕರೆಯುತ್ತಾರೆ. ತುಳುನಾಡಿನಲ್ಲಿ ಬಂಟ ಸಮಾಜದವರು ಸಾಂಪ್ರದಾಯಿಕವಾಗಿ ಬತ್ತದ ಬೇಸಾಯವನ್ನು ಮಾಡುವವರು.

ಸಿರಿಯ ಪಾಡ್ದನದಲ್ಲಿ ಬಂಟ ಸಮಾಜ ಬೇರೆ ಬೇರೆ ವ್ಯಕ್ತಿಗಳು ಮತ್ತು ಅವರ ಅನೇಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಗತಿಗಳ ವಿವರಗಳು ಸಿಗುತ್ತವೆ. ಬಿರ್ಮ ಆಳ್ವ, ಕಾಂತ ಆಳ್ವ, ಶಂಕರ ಆಳ್ವ, ಕಾಂತ ಪೂಂಜ, ಸಿರಿ, ಸೊನ್ನೆ, ಅಬ್ಬುಗೆ, ದಾರೆಗೆ ಇಂತಹ ಬೇರೆ ಬೇರೆ ವ್ಯಕ್ತಿಗಳ ಮೂಲಕ ಆಗಿನ ಕಾಲದ ಬಂಟ ಸಮಾಜದ ಸ್ವರೂಪವನ್ನು ಕೊಡಲಾಗಿದೆ. ಆ ಸಮಾಜದ ಜನನ–ಮರಣ, ಶ್ರಾದ್ಧ, ಸೀಮಂತ, ಮದುವೆ, ಋತುಸ್ನಾನ, ನ್ಯಾಯ ಪಂಚಾಯಿತಿ, ಮನೋರಂಜನೆ ಮೊದಲಾದ ವಿವರಗಳು ಇಲ್ಲಿ ವರ್ಣಿತವಾಗಿವೆ.

ಗುಂಪು ಮನೆಗಳಲ್ಲಿ ವಾಸಿಸುವ ಮುಗೇರರು ಹೆಚ್ಚಾಗಿ ಹಳ್ಳಿಗಳಲ್ಲಿಯೇ ಕಂಡು ಬರುತ್ತಾರೆ. ಮುಗೇರರು ಕಾಡಿನ ಗುಡ್ಡದ ಬದಿಗಳಲ್ಲಿ ಪ್ರತ್ಯೇಕವಾಗಿ ಗುಂಪಾಗಿ ವಾಸ ಮಾಡುವರು. ಸಮೂಹ ಸಂಸ್ಕೃತಿಯನ್ನೇ ಒಳಗೊಂಡಿರುವವರು. ಇವರು ಊರಿನ ಹೊರಗೆ, ಎತ್ತರದ ಪ್ರದೇಶದಲ್ಲಿ, ಗುಡ್ಡದ ಬದಿಯಲ್ಲಿ ವಾಸಿಸುತ್ತಾರೆ.

ಜೀವನಕ್ಕಾಗಿ ದೈಹಿಕ ಶ್ರಮವನ್ನೇ ಅವಲಂಬಿಸಿದ್ದಾರೆ. ಸಾಮಾಜಿಕವಾಗಿ ವ್ಯವಸ್ಥೆಯ ಕೆಳಸ್ತರದವರಾದವರು. ಮುಗೇರರು ವೃತ್ತಿಯಲ್ಲಿ ಕೃಷಿ ಕಾರ್ಮಿಕರು. ಮೂಲದಲ್ಲಿ ಬೇಟೆಯಾಡುವುದು ಮತ್ತು ಮೀನು ಹಿಡಿಯುವುದು ಇವರ ಕಸುಬು.

ತುಳುನಾಡಿನ ಜೈನ ಅರಸರಲ್ಲಿ ವಿವರವಾಗಿ ಐತಿಹಾಸಿಕ ಸ್ವರೂಪದಲ್ಲಿ ಕಾಣಿಸಿಕೊಳ್ಳುವವರು ಎಂದರೆ ಕಲ್ಕುಡ, ಕಲ್ಕುರ್ಟಿ, ಜೈನರು ಧಾರ್ಮಿಕ ಸ್ಥಾನ ಬಸದಿಯ ಹೆಸರು ಪಾಡ್ದನಗಳಲ್ಲಿ ಅನೇಕ ಬಾರಿ ದೊರೆಯುತ್ತದೆ. ಬಸದಿಗಳನ್ನು ಕಟ್ಟಿಸಿದವರು ಶೆಟ್ಟಿಗಳು. ಈ 'ಶೆಟ್ಟಿ' ಎನ್ನುವುದು ಜೈನರಿಗೆ ಅನ್ವಯವಾಗುತ್ತದೆ.

ತುಳುನಾಡಿನ ಪ್ರಸಿದ್ಧ ಸಾಮಾಜಿಕ ವರ್ಗ ಬಿಲ್ಲ, ಬಿರವ, ಬೈದ್ಯ, ಪೂಜಾರಿ ಮೊದಲಾದವರು ಈ ಸಾಮಾಜಿಕ ವರ್ಗ ತುಳುನಾಡಿನಲ್ಲಿ ಕಾಣಿಸಿಕೊಳ್ಳುತ್ತವೆ.

ಹೊಲೆಯರು ಬೇರೆ ಬೇರೆ ಪಂಗಡಗಳ ವಿವರಣೆ ಪಾಡ್ದನಗಳಲ್ಲಿ ಸಿಗುತ್ತವೆ. ಕೊರಗರು, ಬಾಕುಡರು, ಪಂಬಡರು ಅನೇಕ ವಿಚಾರಗಳು ಇವರ ಬಗ್ಗೆ ಪಾಡ್ದನಗಳಲ್ಲಿ ಸಿಗುತ್ತವೆ. ಹೊಲೆಯರ ಒಂದು ವರ್ಗವಾದ ಹೊಲೆಯರ ಪರಿಸ್ಥಿತಿಯನ್ನು ತುಳುನಾಡಿನ ಪರಿಸರದಲ್ಲಿ ತಿಳಿಸುತ್ತವೆ. ಒಬ್ಬ ಯಜಮಾನನ ಕೈ ಕೆಳಗೆ ವಂಶಪಾರಂಪರ್ಯವಾಗಿ ಜೀತದಾಳುಗಳಂತೆ ದುಡಿಯುವ ಹೊಲೆಯರೇ ಮೂಲದ ಹೊಲೆಯರು.

ಒಡೆಯನ ಮನೆಯಲ್ಲಿ ಜಾನುವಾರುಗಳಿಗೆ ಹುಲ್ಲು ಹಾಕುವುದು, ಕಲಗಚ್ಚು ಕುಡಿಸುವುದು ಮುಂತಾದ ಕೆಲಸಗಳನ್ನು ಮಾಡುತ್ತಾರೆ. ಅವರಿಗೆ ಅನ್ನವನ್ನು ಗಂಜಿಯನ್ನು ಹಾಕುವುದು ಕೋರಾಯಿಯಲ್ಲಿ. ಇವರ ಸ್ಥಿತಿ ಸಾಮಾಜಿಕ ದೃಷ್ಟಿಯಿಂದ ತೀರಾ ಕೀಲು ಮಟ್ಟದ್ದಾಗಿರುತ್ತದೆ.

ಒಂದು ಪ್ರದೇಶದ ಸಂಸ್ಕೃತಿಯನ್ನು ಪರಚಯಿಸಲು ಅಲ್ಲಿನ ಜನಪದ ಸಾಹಿತ್ಯ, ಐತಿಹ್ಯಗಳು, ಸ್ಥಳನಾಮಗಳು ಸಹಾಯಕವಾಗುವಂತೆ ಭೌತಿಕ ಸಂಸ್ಕೃತಿಯೂ ಪೂರಕವಾಗುತ್ತದೆ. ಜಾಗರೀಕರಣದ ಕಬಂಧ ಬಾಹುಗಳು ಕಬಂಧ ಬಾಹುಗಳು ಪ್ರಾದೇಶಿಕ ಜನಪದ ಸಂಸ್ಕೃತಿಯ ಕೊರಳು ಹುಸುಕುತ್ತಿರುವ ಪ್ರಸ್ತುತ ಪರಿಸ್ಥಿತಿಯಲ್ಲಿ ಅವುಗಳ ರಕ್ಷಣೆ ಮಾಡಿಕೊಳ್ಳುವುದರಿಂದ ಪ್ರಜಾಪ್ರಭುತ್ವವಾದಿ ಮಾನವಪರ ಚಿಂತನೆಗಳನ್ನು ಉಳಿಸಿಕೊಂಡಂತಾಗುತ್ತದೆ. ಮಾನವ ಸಂಬಂಧಗಳನ್ನು ಮರುಬೆಸೆದು ಮಾನವೀಯ ಮೌಲ್ಯಗಳನ್ನು ಉಳಿಸಿಕೊಂಡು ಬರುತ್ತದೆ.

ಅಡಿ ಟಿಪ್ಪಣಿ:

೧. ಡಾ. ಬಿ.ಎ. ವಿವೇಕ ರೈ, ತುಳು ಜನಪದ ಸಾಹಿತ್ಯ, ಪುಟ ೨೬

೨. ಡಾ. ಬಿ.ಎ. ವಿವೇಕ ರೈ, ತುಳು ಜನಪದ ಸಾಹಿತ್ಯ, ಪುಟ ೨೬

೩. ಡಾ. ಬಿ.ಎ. ವಿವೇಕ ರೈ, ತುಳು ಜನಪದ ಸಾಹಿತ್ಯ, ಪುಟ ೨೬

# ಅಧ್ಯಾಯ – ೩

## ‘ಗಾಂಧಿ ಬಂದ’ ಕಾದಂಬರಿಯಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ನೋಟಗಳು

ಇಂದು ಸಮಾಜ ಶಾಸ್ತ್ರವು ಅಧ್ಯಯನದ ಒಂದು ಶಿಸ್ತಿನ ಶಾಖೆಯಾಗಿ ಬೆಳೆದಿದ್ದು ಒಳ ಭಾಗಗಳು ಸ್ವತಂತ್ರವಾಗಿ ಕಾರ್ಯನಿರ್ವಹಿಸಲು ಪ್ರತಿಯೊಂದು ವಿಜ್ಞಾನವೂ ತನ್ನ ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ನಿರ್ದಿಷ್ಟವಾದ ಪ್ರಾಥಮಿಕ ಕಲ್ಪನೆಗಳನ್ನು ಅಥವಾ ಮೂಲಭೂತ ವಿಷಯಗಳನ್ನು ಹೊಂದಿರುತ್ತದೆ. ಸಮಾಜ ಶಾಸ್ತ್ರದಲ್ಲಿ ಬಳಸಲಾಗುವ ಸಮಾಜ, ಸಾಮಾಜಿಕ ರಚನೆ, ಸಮುದಾಯ ಸಂಘ, ಸಂಸ್ಥೆ ಮುಂತಾದ ಕೆಲವು ಭಾವರೂಪಗಳನ್ನು ಸಾಮಾನ್ಯ ಮನುಷ್ಯನೂ ಉಪಯೋಗಿಸುತ್ತಾನೆ.

‘Society’ ಎಂಬ ಇಂಗ್ಲೀಷ್ ಶಬ್ದವು ಲ್ಯಾಟಿನ್ ಪದವಾದ ‘ಸೊಸೈಟಿಸ್’ ದಿಂದ ಉತ್ಪತ್ತಿಯಾಗಿದೆ. ‘ಸೊಸೈಟಿಸಂ’ ಎಂದರೆ ಒಡನಾಡಿಗಳಿಂದ ಕೂಡಿದ ಒಂದು ಸಮೂಹ ಅಂದರೆ ಸಹಚರ, ಸಮಾನ ಸ್ವಭಾವಗಳುಳ್ಳ ಜೀವಿಗಳು ಸಾಂಘಿಕವಾದ ಸಂಬಂಧಗಳನ್ನು ಹೊಂದಿರುವ ವ್ಯವಸ್ಥೆಯನ್ನು ಸಮಾಜವೆನ್ನುವರು. ಮಾನವ ಸಮಾಜವನ್ನು ಪ್ರಜ್ಞಾವಂತರಾದ ಅಥವಾ ಅರಿವುಳ್ಳ ವ್ಯಕ್ತಿಗಳು ಸೃಷ್ಟಿಸಿದ ಸಂಘಟಿತ ವ್ಯವಸ್ಥೆ ಎಂಬುದಾಗಿ ಹೇಳಬಹುದು. ಸಮಾಜ ಎಂದರೇನು? ಸಮಾಜ ಎನ್ನುವ ಪದ ಸಮಸ್ತ ಮನುಕುಲದ ಎಲ್ಲಾ ಸಾಮಾಜಿಕ ಸಮೂಹ ಮತ್ತು ಸಂಬಂಧಗಳಿಗೆ ಅನ್ವಯಿಸುತ್ತದೆ. ಪಿ.ಗಿಸ್‌ಬರ್ಟ್ "ಸಮಾಜ, ಸಾಮಾನ್ಯವಾಗಿ, ಸಾಮಾಜಿಕ ಸಂಬಂಧಗಳಿಂದ ಸುತ್ತುಗಟ್ಟಿದೆ ಮತ್ತು ಇದರ ಮೂಲಕ ಪ್ರತಿಯೊಬ್ಬ ವ್ಯಕ್ತಿಯು ತನ್ನ ಇತರ ಸಹವಾಸಿಗಳೊಂದಿಗೆ ಪರಸ್ಪರ ಸಂಬಂಧಗಳನ್ನು ಹೊಂದಿದ್ದೇನೆ ಎಂದು ಹೇಳುತ್ತಾರೆ"[೧].

ಮೆಕೈವರ್ ಮತ್ತು ಪೇಜ್ ರವರು, ಸಮಾಜವೆಂದರೆ, "ಸಾಮಾಜಿಕ ಸಂಬಂಧಗಳ ಬಲೆ"[೨] ಎಂಬುದಾಗಿ ಹೇಳಿದ್ದಾರೆ. ಸಾಮಾಜಿಕ ಕ್ರಿಯೆ ಮತ್ತು ಸಂಬಂಧಗಳ ಸಾಮಾಜಿಕ ಜೀವನದಲ್ಲಿ ಬಹು ಮುಖ್ಯವಾದ ಅಂಶಗಳಾಗಿವೆ. ಅನುಕಂಪ, ದ್ವೇಷ, ಪ್ರೀತಿ, ಅಸೂಯೆ ಮುಂತಾದ ಕೆಲವು ಮನೋಭಾವನೆಗಳು ಸಾಮಾಜಿಕ ಜೀವನಕ್ಕೆ ಸಂಬಂಧಪಟ್ಟವುಗಳಾಗಿರುತ್ತವೆ. ಈ ತರಹದ ಸಾಮಾಜಿಕ ಕ್ರಿಯೆಗಳಿಂದ ಸಾಮಾಜಿಕ ಸಂಬಂಧಗಳು ಉಂಟಾಗುತ್ತವೆ ಎಂದು ಹೇಳಿದ್ದಾರೆ.

ಸಾಮಾಜಿಕ ಜವಾಬ್ದಾರಿ ಸಾಹಿತಿಯೊಬ್ಬನಿಗೆ ತುಂಬ ಮಹತ್ವದ್ದು, ತನ್ನ ಸಮಕಾಲೀನ ಜನ, ಪ್ರದೇಶ, ಭಾಷೆಗಳ ವಿಚಾರದಲ್ಲಿ ನಡೆಯುವ ಸಕಲ ಆಗುಹೋಗುಗಳನ್ನು ಸಾಕ್ಷೀಭೂತವಾಗಿ ಗಮನಿಸುವುದು ಜೊತೆಗೆ ಉಚಿತಾನುಚಿತ ಪ್ರಜ್ಞೆಯ ಹಿನ್ನೆಲೆಯಲ್ಲಿ ಅವುಗಳನ್ನು ಸಮರ್ಥವಾಗಿ

ಅಭಿವ್ಯಕ್ತಿಸುವುದು ಮುಖ್ಯವಾಗಿದೆ. ಕಾದಂಬರಿಕಾರನೊಬ್ಬ, ಕಾದಂಬರಿಯ ಮೂಲಕ ಸುತ್ತಲ ಪರಿಸರದ ಜೀವಂತ ಚಿತ್ರಣಗಳನ್ನು ನೀಡಿರುತ್ತಾನೆ. ಕಥಾವಸ್ತುವೊಂದರ ಪರಿಪೋಷಣೆಯನ್ನು ಮಾಡುತ್ತಲೇ ಸುತ್ತಲ ಪರಿಸರವನ್ನು ಕಾದಂಬರಿಯಲ್ಲಿ ಕಲಾತ್ಮಕವಾಗಿ ನಿರೂಪಿಸಲೆತ್ನಿಸುತ್ತಾನೆ.

ಎಚ್. ನಾಗವೇಣಿಯವರು 'ಗಾಂಧಿ ಬಂದ' ಕಾದಂಬರಿಯಲ್ಲಿ ತುಳುನಾಡಿನ ಸಂಸ್ಕೃತಿಯ ಮತ್ತು ಸಾಮಾಜಿಕ ಚಿತ್ರವೊಂದು ದಮನಿತರ ದೃಷ್ಟಿಯಿಂದ ಕಾಣಬಹುದು. ಜಾತೀಯ ತಾರತಮ್ಯ, ವೈಷಮ್ಯ, ಜಮೀನ್ದಾರರ ಚಾಣಾಕ್ಷತೆಗಳು, ಸಾಮಾಜಿಕ ಜೀವನದ ವಿವರ, ಸಮಾಜದ ಪದರು ಪದರುಗಳಲ್ಲಿ ಬಾಳಿ ಬದುಕಿದ ಜನರನ್ನು ತಿಳಿಯಲು ಸಹಾಯಕವಾಗುತ್ತದೆ.

ಕರಾವಳಿ ತೀರದ ಜನರು, ಅವರ ಜೀವನಕ್ರಮ, ಅನುಸರಿಸುತ್ತಿದ್ದ ಪದ್ಧತಿಗಳು, ನಂಬಿಕೆಗಳು ಎಲ್ಲ ತಮ್ಮ ಗುಣರೂಪದೊಂದಿಗೆ ಪರಿಚಿತವಾಗುತ್ತದೆ. ಮುನ್ನೂರ ಅರವತ್ತೈದು ಪುಟಗಳ ಗಾತ್ರದ ಕಾದಂಬರಿ ಆವರಣಗಳನ್ನು ಐತಿಹಾಸಿಕವಾದ ಸನ್ನಿವೇಶ, ಆವರಣಗಳನ್ನು ಸೃಷ್ಟಿಸಬೇಕಾದ ಅನಿವಾರ್ಯತೆಯನ್ನು ಹೊಂದಿದೆ. 'ಗಾಂಧಿ ಬಂದ' ಎಂಬ ಹೆಸರೂ ಧ್ವನಿ ಪೂರ್ಣವಾಗಿದೆ. 'ಗಾಂಧಿ' ವ್ಯಕ್ತಿಯಾಗಿ ಮಾತ್ರ ಮಂಗಳೂರಿಗೆ ಬರದೆ ಶೋಷಿತ ಜನರ ಬಿಡುಗಡೆಯ ಆಶಯವಾಗಿಯೂ ಮಂಗಳೂರಿಗೆ ಮೂರು ಬಾರಿ ಬರುತ್ತಾರೆ. ಇದರಲ್ಲಿ ಪರಿಸರದ ಅಂಶಗಳಿವೆ.

ಭಾರತೀಯ ಸಮಾಜವನ್ನು ಯಾವುದೇ ಕಾಲ ಮತ್ತು ಪ್ರಾದೇಶಿಕ ಮಿತಿಯಲ್ಲಿ ಪರಿಶೀಲಿಸಿದರೂ, ನಾವು ಜಾತಿ ಪದ್ಧತಿಯ ಬಗ್ಗೆ ತಿಳಿಯುವುದು ಅನಿವಾರ್ಯವಾಗುತ್ತದೆ. ಸಮಾಜದಲ್ಲಿ ಜಾತಿ ಉಪಜಾತಿಗಳು 'ಜಾತಿಗಳು' ಎಂದು ಕರೆಯಲಾಗಿದೆ. ಡಾ. ಗುರ‍್ರೆಯವರು ಹೇಳಿದಂತೆ, ಜಾತಿ ವ್ಯವಸ್ಥೆಯಿಂದಾಗಿ ಸಮಾಜವು ಹೋಳಾಗಿ ಹಲವು ಪಂಗಡಗಳಾಗಿ ಸಾಮಾಜಿಕ ಸ್ಥಾನಮಾನ, ಅಂತಸ್ತು, ಹಕ್ಕು ಬಾಧ್ಯತೆಗಳು ನಿರ್ಧರಿಸಲ್ಪಟ್ಟಿವೆ. ಆದ್ದರಿಂದ ಜಾತಿಯು ಏಕತೆಯಿಂದ ಕೂಡಿದ ಸಮುದಾಯ ವಾಗುವುದಿಲ್ಲ. ಸಮಾಜದಲ್ಲಿ ವ್ಯಕ್ತಿಯ ಸ್ಥಾನಮಾನವು ಸಾಂಪ್ರದಾಯಿಕವಾಗಿ ಆತನ ಹುಟ್ಟಿನಿಂದ ನಿರ್ಧಾರವಾಗುತ್ತದೆಯೇ ಹೊರತು ಆತನು ಹೊಂದಿರುವ ಸಂಪತ್ತಿನಿಂದಲ್ಲ. ಪ್ರತಿಯೊಂದು ಜಾತು ಉಪಜಾತಿಯು ತನ್ನದೇ ಆದ ನೀತಿ ನಿಯಮಗಳನ್ನು ಹೊಂದಿದ್ದು, ಸದಸ್ಯರು ಜಾತಿಯ ನಿಯಮವನ್ನು ಮೀರಿ ನಡೆದರೆ ಅಂತರವನ್ನು ಜಾತಿಯಿಂದ ಹೊರಹಾಕುವುದಲ್ಲದೆ, ಬಹಿಷ್ಕಾರ, ದಂಡ ವಿಧಿಸುವುದು ಮುಂತಾದ ಶಿಕ್ಷೆಗಳಿಗೆ ಗುರಿಪಡಿಸಲಾಗುತ್ತದೆ. ಜಾತಿ ಸದಸ್ಯತ್ವ ವರ್ಗಾಯಿಸುವಂತದ್ದಲ್ಲ.

ಸಂಸ್ಕೃತಿಯು ಸಾಮಾಜಿಕವಾದದ್ದು. ಮಾನವ ಶಾಸ್ತ್ರ ಹಾಗೂ ಸಮಾಜ ಶಾಸ್ತ್ರದಲ್ಲಿ ಸಂಸ್ಕೃತಿಗೆ ವಿಶಿಷ್ಟ ಅರ್ಥವನ್ನು ನೀಡಲಾಗಿದೆ. ಸಂಸ್ಕೃತಿಯು ಮಾನವ ಸಮಾಜದ ಉಸಿರು. ಅದು ಮಾನವನ

ಸಮೂಹ ಜೀವನದ ಅಭಿವ್ಯಕ್ತಿ, ಸಂಸ್ಕೃತಿ ಮತ್ತು ಸಮಾಜಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಒಂದನ್ನು ಬಿಟ್ಟು ಇನ್ನೊಂದು ಇರಲಾರದು. ಅಂತೆಯೇ ಸಂಸ್ಕೃತಿಯ ಹೊರತಾಗಿ ಸಮಾಜದ ಅಧ್ಯಯನ ಅಸಾಧ್ಯ.

ಸಂಸ್ಕೃತಿಯು ಮಾನವನ ಅನುಪಮವಾದ ಹಾಗೂ ವಿಶಿಷ್ಟವಾದ ಆಸ್ತಿ. ಅದು ಮಾನವನ ಸಮಾಜದ ಗುಣಲಕ್ಷಣಗಳಲ್ಲೊಂದಾಗಿದೆ. ಮಾನವನಿಗಿಂತಲೂ ಕೆಳಮಟ್ಟದಲ್ಲಿ ಅರ್ಥಾತ್ ಪ್ರಾಣಿಗಳಲ್ಲಿ ಸಂಸ್ಕೃತಿಯು ಅಸ್ತಿತ್ವದಲ್ಲಿಲ್ಲ. ಪ್ರಾಣಿಗಳು ನೈಸರ್ಗಿಕ ಪರಿಸರದಲ್ಲಿ ಬದುಕುವುದಾದರೆ ಮಾನವನು ಮಾತ್ರ ಸಾಂಸ್ಕೃತಿಕ ಪರಿಸರದಲ್ಲಿ ಬದುಕುತ್ತಾನೆ. ಮಾನವನು ಸಮಾಜದಲ್ಲಿ ಹುಟ್ಟಿ ಸಮಾಜದಲ್ಲಿ ಬೆಳೆಯುತ್ತಾನೆ. ಮಾನವನು ಸಮೂಹ ಜೀವಿ ಎನ್ನುವುದು ಮಾನವನು ಸಾಂಸ್ಕೃತಿಕ ಜೀವಿ ಎನ್ನುವುದಕ್ಕೆ ಪರ್ಯಾಯವಾಗಿದೆ.

ಸಂಸ್ಕೃತಿಯು ಬಹು ಅರ್ಥ ವ್ಯಾಪ್ತಿಯುಳ್ಳ ಪರಿಕಲ್ಪನೆಯಾಗಿದೆ. ಸಂಸ್ಕೃತಿಯು ಮಾನವನ ಜೀವನದ ವಿಧಾನದ ಪ್ರತೀಕ ಅಥವಾ ಜೀವಿತದ ಒರೆಗಲ್ಲು. ಸಂಸ್ಕೃತಿಯು ನಮ್ಮ ನಡತೆಯನ್ನು, ನೈತಿಕತೆಯನ್ನು, ಸಂಪ್ರದಾಯಗಳನ್ನು, ನಂಬಿಕೆ, ಆಚರಣೆಗಳನ್ನು, ಮೌಲ್ಯ ದರ್ಶನಗಳನ್ನು, ಧಾರ್ಮಿಕ,. ರಾಜಕೀಯ ಮತ್ತು ಆರ್ಥಿಕ ಚಟುವಟಿಕೆಗಳನ್ನು ಒಳಗೊಂಡಿವೆ. ತನ್ನ ವ್ಯಕ್ತಿಗತ ಹಾಗೂ ಸಾಮಾಜಿಕ ಜೀವನದಲ್ಲಿ ಮಾನವನು ಗಳಿಸಿರುವ ಎಲ್ಲಾ ಅಂಶಗಳನ್ನು ಸಂಸ್ಕೃತಿಯು ಒಳಗೊಂಡಿದೆ.

ಇದು 'ಸಂಸ್ಕೃತಿ' ಅಧ್ಯಯನವಾದ್ದರಿಂದ 'ಸಂಸ್ಕೃತಿ' ಎಂಬ ಪರಿಕಲ್ಪನೆಯನ್ನು ಸ್ಪಷ್ಟಗೊಳಿಸುವುದೊಳಿತು, 'ಸಂಸ್ಕೃತಿ' ಪದದ ಅರ್ಥ ಇಂಗ್ಲೀಷಿನ `Culture' ಎಂಬ ಪದಕ್ಕೆ ಸಂವಾದಿಯಾಗಿ ಬಳಸುತ್ತೇವೆ. ಲ್ಯಾಟಿನ್ ಭಾಷೆಯ 'ಕಲ್ಟ್' ಮೂಲ ಪದದಿಂದ ಬಂದಿದೆ. ಇದಕ್ಕೆ ಕೃಷಿ, ಅಭಿವೃದ್ಧಿ, ಸಾಗುವಳಿ, ವ್ಯವಸಾಯ ಎಂಬ ಅರ್ಥಗಳಿವೆ. ಅರ್ನಾಲ್ಡ್ 'ಸಂಸ್ಕೃತಿಯು ಬದುಕಿನ ಬಹುಶ್ರೇಷ್ಠ ಮೌಲ್ಯ' ಎನ್ನುತ್ತಾನೆ. ಎಲಿಯೆಟ್ ವ್ಯಕ್ತಿ, ಸಮೂಹ ಮತ್ತು ಸಾಮಾಜಿಕ ಹಿನ್ನಲೆಯಲ್ಲಿ ಉತ್ತಮಿಕೆಯ ಅಂಶಗಳನ್ನು ಸಂಸ್ಕೃತಿ ಎನ್ನುತ್ತಾನೆ. ಕನ್ನಡದಲ್ಲಿ ಸಾಂಸ್ಕೃತಿಕ ಅಧ್ಯಯನಗಳು ನಡೆದಾಗಲೆಲ್ಲ ಹಲವಾರು ವ್ಯಾಖ್ಯೆಗಳನ್ನು ಕೊಟ್ಟಿದ್ದಾರೆ. ಈ ಎಲ್ಲಾ ಪ್ರಯತ್ನಗಳ ಹಿನ್ನೆಲೆಯಲ್ಲಿ 'ಸಂಸ್ಕೃತಿ' ಎಂಬುದನ್ನು ತಿಳಿಯಬಹುದಾಗಿದೆ.

ಮಾನವನ ಒಟ್ಟು ಬದುಕಿನ ದೃಷ್ಟಿಯನ್ನು ಅಮುಖ್ಯವೆನ್ನಬಹುದಾದ ವಿವರಗಳನ್ನು ಸಂಸ್ಕೃತಿ ತೋರಿಸುತ್ತದೆ. ಉದ್ಯೋಗ, ವ್ಯವಹಾರ, ಆಹಾರ ಪಾನೀಯಗಳು, ಬಟ್ಟೆ ಬರೆಗಳು, ಇದರಲ್ಲಿ ಒಳಗೊಂಡಿರುತ್ತದೆ. ಜನರು ಸೇವಿಸುವ ಆಹಾರ, ಧರಿಸುವ ಬಟ್ಟೆಗಳಲ್ಲಿ ಪ್ರಾದೇಶಿಕ ಅಗತ್ಯಕ್ಕೆ ತಕ್ಕಂತೆ

ಹವಾಮಾನ, ಮಳೆ, ಉಷ್ಣಾಂಶಗಳ ಹಿನ್ನೆಲೆಯಲ್ಲಿ ರೂಪುಗೊಂಡಿರುತ್ತದೆ. ಪ್ರಾದೇಶಿಕ ವ್ಯತ್ಯಾಸದಿಂದಾಗಿಯೇ ಮೈತುಂಬ ಉಡುಪು ಧರಿಸುವ, ಅರೆನಗ್ನವಾಗಿರುವ 'ಶಾಖಾಹಾರಿ' ಮಾಂಸಹಾರಿ ಗಳನ್ನು ಕಾಣುತ್ತೇವೆ. ಒಬ್ಬ ಮನುಷ್ಯನ ಆಹಾರ, ಉಡುಪುಗಳು ಆತ ಬದುಕಿದ ಸಮಾಜದ ಧಾರ್ಮಿಕ, ಆರ್ಥಿಕ ಕಲಾತ್ಮಕ ಅಂಶಗಳೊಡನೆ ಜೋಡಣೆಯನ್ನು ಪಡೆದಿರುತ್ತದೆ.

ಪ್ರತಿ ಜಾತಿಯೂ ತನ್ನದೇ ಆದ ಸಂಪ್ರದಾಯ, ಕ್ರಿಯಾವಿಧಿ, ಆಚರಣೆಗಳನ್ನು ಹೊಂದಿರುವುದಲ್ಲದೆ ಜೀವನ ಶೈಲಿಯೂ ಭಿನ್ನವಾಗಿರುತ್ತದೆ. ಸದಸ್ಯರನ್ನು ಜಾತಿಯ ಪದ್ಧತಿಯಂತೆ ನಡೆಯಲು ಮಾರ್ಗದರ್ಶನ ನೀಡುತ್ತವೆ.

ಹುಟ್ಟಿನೊಂದಿಗೆ ಸಾಮಾಜಿಕ ಚೌಕಟ್ಟಿನಲ್ಲಿ ಗುರುತಿಸಬಹುದಾದ ವಿಚಾರವನ್ನು ಕಾದಂಬರಿಗಳು ತಿಳಿಸುತ್ತವೆ. ಈ ಕಾದಂಬರಿಯಲ್ಲಿ ಕಾಣಿಸುವ ಜೀವನ ಕ್ರಮದಲ್ಲಿ ಬ್ರಾಹ್ಮಣ, ಶೆಟ್ಟರು, ಬಂಟರು, ಪೂಜಾರಿ, ಮ್ಯೊಲಿಗಳು, ಬ್ಯಾರಿಗಳು, ಅಕ್ಕಸಾಲಿಗರು, ಮೊಗೇರರು, ಕೊರಗರು, ಮಡಿವಾಳ, ಮುಂಡಾಲರು, ಮಾರಿ ಮನ್ಸರೂ, ಬೆಸ್ತರು, ಇತ್ಯಾದಿ ಜಾತಿ–ಉಪಜಾತಿಗಳ ಜನರು ಬರುತ್ತಾರೆ. ಇದರಿಂದ ಭಿನ್ನ ಭಿನ್ನ ಸಾಮಾಜಿಕ ಸ್ತರಗಳು ಸಹಜವಾಗಿ ಏರ್ಪಟ್ಟಿವೆ. ತಲೆಮಾರುಗಳಿಂದ ಬಂದ ಜೀವನ ವಿಧಾನ ನಂಬಿಕೆ ಆಚರಣೆಗಳಿಂದಲೂ ಮತ್ತು ವಿಭಿನ್ನವಾದ ಸಾಮಾಜಿಕ ಸ್ಥಾನಮಾನ, ವರ್ತನೆ, ವ್ಯವಹಾರಗಳಿಂದಲೂ ಈ ಸ್ತರಗಳ ವಿಶಿಷ್ಟತೆಯನ್ನು ಪ್ರಕಟಿಸುತ್ತವೆ. ಒಂದು ಸಾಂಸ್ಕೃತಿಕ ಪ್ರವಾಹವನ್ನು ರೂಪಿಸುವಲ್ಲಿ ತಮ್ಮದೇ ನೆಲೆಯಲ್ಲಿ ಮಹತ್ವ ಪಡೆಯುತ್ತವೆ.

ಕರಾವಳಿ ಪ್ರದೇಶದಲ್ಲಿ ಕೃಷಿ, ಜೀತಪದ್ಧತಿ, ದೇವರು, ದೈವಗಳ ಪೂಜೆ, ಹರಕೆ, ಭೂತದ ಕೋಲ, ಹಬ್ಬ, ಆಚರಣೆಗಳು ಜಾತಿ ಪದ್ಧತಿಯೊಂದಿಗೆ ಸಂಬಂಧ ಪಡೆದು, ಸಾಮಾಜಿಕ ಚಲನೆಗೆ ಕಾರಣಗಳಾಗುತ್ತವೆ.

ಕಾದಂಬರಿಯಲ್ಲಿ ಬರುವ ಗುತ್ತಿನ ಶೆಟ್ಟರು, ಭೂತಾಳ್ಯೆತರು, ಪುರೋಹಿತರು, ಪೂಜಾರಿ, ಒಕ್ಕಲು ಮಕ್ಕಳು, ಇವರೆಲ್ಲ ಸಮಾಜದೊಂದಿಗೆ ಸಂಬಂಧ ಪಡೆದಿದ್ದಾರೆ. ಅವರೆಲ್ಲ ಆಯಾ ಸ್ತರಗಳ ಪ್ರತಿನಿಧಿಗಳಾಗಿ, ಪ್ರಾದೇಶಿಕ ಘಟಕಗಳಾಗಿ ಹೆಚ್ಚಿನ ಅರ್ಥವಂತಿಕೆ ಪಡೆದುಕೊಳ್ಳುತ್ತಾರೆ.

ಕಾದಂಬರಿಯಲ್ಲಿ ಬ್ರಾಹ್ಮಣರು ಸಮಾಜದ ಮೇಲಿನ ಸ್ತರದಲ್ಲಿ ಕಂಡು ಬರುತ್ತಾರೆ. ಅವರು ಧರ್ಮ ದೇವರುಗಳ ವಿಚಾರದಲ್ಲಿ ಬಲ್ಲವರು. ಪೂಜೆ ಪುನಸ್ಕಾರ, ಸುಶಿಕ್ಷಿತರು ಎಂದು ಇತರರಿಂದ ಮರ್ಯಾದೆ ಪಡೆದಿದ್ದಾರೆ. ಪೂಜೆಯಿರಲಿ, ದೇವಾಲಯದ ಮೇಲ್ವಿಚಾರಣೆ, ಪುರಾಣ, ಪ್ರವಚನಗಳಿರಲಿ ಅಂತಹ ಕಡೆ

ಪುರೋಹಿತ ಜೋಯಿಸರಾಗಿಯೂ ಬ್ರಾಹ್ಮಣರು ಮುಂಚೂಣಿಯಲ್ಲಿರುತ್ತಾರೆ. ಬ್ರಾಹ್ಮಣರು "ಜನಬಲ, ಹಣಬಲ, ತೋಳ್ಬಲಗಳಿರುವ ಪ್ರಬಲವಾದ ಬಂಟರ ಜಾತಿಗೆ ಸಮಯೋಚಿತವಾದ ಬುದ್ಧಿಬಲ ನೀಡುವವರು ಮಹಾಬ್ರಾಹ್ಮಣರಲ್ಲದೆ ಬೇರಾರೂ ಅಲ್ಲ. ತಮ್ಮ ಚಾಣಾಕ್ಷ ಬುದ್ಧಿ ಬಲವನ್ನು ಹೆಬ್ಬಾರರು ಆಗಾಗ್ಗೆ ಈ ಬಂಟರಿಗೆ ಧಾರೆ ಎರೆಯುವುದಿದೆ. ಅದನ್ನು ಶೆಟ್ಟರೂ ಸಮರ್ಥವಾಗಿ ಬಳಸಿಕೊಂಡು ಕೆಲಸ ಸಾಧನೆ ಮಾಡಿಕೊಳ್ಳುವುದೂ ಇದೆ."[೩] ಇಲ್ಲಿ ಜಾತಿ ವ್ಯವಸ್ಥೆಯ ವೈರುಧ್ಯಗಳನ್ನು ಕಾಣುತ್ತೇವೆ. ಇಲ್ಲಿ ಶೆಟ್ಟರೂ, ಭಟ್ಟರೂ ಸೇರಿಯೇ ತಮ್ಮ ಹಿತಗಳನ್ನು ಕಾಪಾಡಿಕೊಳ್ಳುತ್ತಾರೆ. ಈ ಕಾದಂಬರಿಯಲ್ಲಿ ಬರುವ ಬ್ರಾಹ್ಮಣರ ಕರ್ತವ್ಯಗಳ ಬಗೆಗಿನ ಪರಿಚಯವನ್ನು ಕಾಣಬಹುದು. "ಹೆಬ್ಬಾರರು ಜಮೀನ್ದಾರಿಕೆ, ಕಿಟ್ಟು ಭಟ್ಟರು ಪಂಚಾಂಗ ನೋಡಿ ಭವಿಷ್ಯ ಹೇಳುವುದು, ಪುರೋಹಿತಗಾರಿಕೆ, ಶಾನುಭೋಗ ಮಾಡುವುದು ಬ್ರಾಹ್ಮಣರ ಕರ್ತವ್ಯಗಳು. ಆದ್ದರಿಂದ ಬ್ರಾಹ್ಮಣರನ್ನು ಕಂಡರೆ ಭಯ ಭಕ್ತಿ, ಬ್ರಾಹ್ಮಣರು ಜನವರ್ಗದ ಜೊತೆಗೆ ಬದುಕುತ್ತಿದ್ದರೂ, ಮಡಿ–ಮೈಲಿಗೆಗಳಿಂದಾಗಿ ಸಾಮಾನ್ಯ ಜನರಿಂದ ದೂರಕ್ಕೆ ಉಳಿಯುತ್ತಿದ್ದರು. ಅವರನ್ನು ದೂರದಿಂದ ಮಾತನಾಡಿಸುವುದು, ಪಂಕ್ತಿ ಭೇದ ಮಾಡುವುದನ್ನು ಕಾಣುತ್ತೇವೆ. ಮೇಲ್ಜಾತಿಯವರ / ಮಕ್ಕಳು ಕೆಳ ವರ್ಗದವರನ್ನು ಹೆಸರ್ಹಿಡಿದು ಕರೆಯಬಾರದು, ಪಂಕ್ತಿ ಭೇದ ಮಾಡುವ ಸಂದರ್ಭವನ್ನು ಕಾದಂಬರಿಯಲ್ಲಿ ಕಾಣುತ್ತೇವೆ. "ಕಂಬಳದ ದಿನ ಮೊದಲೆರಡು ಪಂಕ್ತಿ ಬ್ರಾಹ್ಮಣರದ್ದು; ಮೂರನೇ ಪಂಕ್ತಿ ಶೂದ್ರರದ್ದು ಹೊರಗಡೆ ಅಂಗಳದಲ್ಲಿ. ಐದನೇ ಪಂಕ್ತಿ ಗದ್ದೆಯಲ್ಲಿ ಕೊರಗರಿಗೆ ಮತ್ತು ಹೊಲೆ ಮಕ್ಕಳಿಗೆ, ಅವರಿಗೆಲ್ಲ ಬಡಿಸುವವರು ಶೂದ್ರರು."[೪] ಇಲ್ಲಿ ಹಗಲೆಲ್ಲ ಬ್ರಾಹ್ಮಣರಿಗಾಗಿ ದುಡಿಯುವವರು ಶೂದ್ರರು, ಬ್ರಾಹ್ಮಣರು ಶ್ರೇಷ್ಠರಾಗಿ ವರ್ತಿಸುವುದನ್ನು ಕಾಣಬಹುದು.

ಇವರ ತರುವಾಯ ತುಳುನಾಡಿನ ಒಂದು ಪ್ರತಿಷ್ಠಿತ ಮನೆತನ ಬಂಟ ಸಮಾಜದ ಬಗ್ಗೆ ಸಮಗ್ರ ಚಿತ್ರಣವನ್ನು ಕಾಣಬಹುದು. ಬಂಟರನ್ನು 'ಬಾರಗರು' ಎಂದು ಕರೆಯುವ ರೂಢಿ ಇದೆ. ಭೂತದ ಉತ್ಸವಗಳಲ್ಲಿ, ಕಂಬಳದಲ್ಲಿ ಭಾಗವಹಿಸುತ್ತಾರೆ. ಭೂತವು 'ಬಾರಗೆರೆ' ಎಂದು ಕರೆದು ಪ್ರಸಾದ ಕೊಡುತ್ತದೆ. ಇವರು ಭತ್ತದ ಬೇಸಾಯವನ್ನು ಮಾಡುವರು. ಜಮೀನ್ದಾರರೂ ಸಹ ಆಗಿದ್ದಾರೆ. ಇವರಿಗೆ ಸಾಮಾಜಿಕ ಸ್ಥಾನ ಮಾನವಿದೆ. ಕಾದಂಬರಿಯಲ್ಲಿ ಬಹುಪಾಲು ವಿವರಗಳು, ಅವರ ಅನೇಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಗತಿಗಳ ವಿವರಗಳು ದೊರೆಯುತ್ತವೆ. ಆ ಸಮಾಜದ ಜನನ, ಮರಣ, ಶ್ರಾದ್ಧ, ಮನೋರಂಜನೆ ವಿವರಗಳು ವರ್ಣಿತವಾಗಿವೆ. "ಇವರಲ್ಲಿ ಅಹಂ ಇದ್ದರೂ ನ್ಯಾಯಕ್ಕಾಗಿ ಹೋರಾಡುವವರು. ಇವರಲ್ಲಿ ಸಹಜವಾದ ಅಬ್ಬರವಿದೆ. ಹುಂಬತನವಿದೆ. ಆದರೆ ಇನ್ನೊಬ್ಬರನ್ನು ಮೆಟ್ಟಿಹಾಕುವ ಸ್ವಾರ್ಥ ಇಲ್ಲದಿರುವುದು ಕಂಡು ಬರುತ್ತದೆ"[೫]

ತುಳುನಾಡಿನಲ್ಲಿ ಇನ್ನೊಂದು ಪ್ರಸಿದ್ಧ ಸಾಮಾಜಿಕ ವರ್ಗ ಎಂದರೆ ಬಿಲ್ಲವರು, ಬಿರುವ, ಬೈದ್ಯ, ಪೂಜಾರಿ ಮೊದಲಾದ ಉಪನಾಮಗಳಲ್ಲಿ ಈ ವರ್ಗ ಕಾಣಿಸಿಕೊಳ್ಳುತ್ತದೆ. ಬಿರುವ ಎಂದರೆ ಬಿಲ್ಲಿನ ಮೂಲಕ ಬೇಟೆಯಾಡುವವ ಎಂದು ಅರ್ಥ. ಬೈದ್ಯ ಎಂದರೆ ವೈದ್ಯ ಔಷಧ ಮದ್ದುಗಳನ್ನು ಕೊಡುವಾತ. ಪೂಜಾರಿ ಭೂತದ ಉತ್ಸವಗಳಲ್ಲಿ ಅರ್ಚಕನಾಗಿ ಕೆಲಸ ಮಾಡುತ್ತಾನೆ. ಇವರ ಮುಖ್ಯ ಕಸುಬು ತಾಳೆ ಮರಗಳಿಂದ ಹೆಂಡ ಇಳಿಸುವುದು. ಕಳ್ಳು ತೆಗೆಯುವುದು ಇವರ ಸಾಂಪ್ರದಾಯಿಕವಾದ ಕಸುಬು.

ಮೊಗೇರರು ಅಥವಾ ಮೊಗವೀರರು ಸಾಂಪ್ರದಾಯಿಕವಾಗಿ ಮೀನುಗಾರಿಕೆಯ ಕಸುಬನ್ನು ಮಾಡುವವರು. ಕಡಲನ್ನು ದೇವರೆಂದು ಪೂಜಿಸುವವರು. ಮೇಲ್ಜಾತಿಯವರು ಗೇಣಿ ವಸೂಲಿ ಮಾಡುವಾಗ ಮೊಗೇರರ ಸಹಾಯವನ್ನು ಯಾಚಿಸುವರು. ಆದರೆ "ನ್ಯಾಯವಿದ್ದಲ್ಲಿ ಎದೆ ಸೆಟೆಸಿ ನಿಂತು ಜೀವಕ್ಕೆ ಜೀವ ಕೊಡಲು ಸಿದ್ಧ. ಅಲ್ಲಿ ಮೋಸ, ಕುತಂತ್ರ, ಸ್ವಾರ್ಥಲಾಲಸೆ ಇರುವಕಡೆ ಕೊಲ್ಲಲೂ ಸಿದ್ಧ".[1] ಇವರ ಕಸುಬು ಮೀನು ಹಿಡಿಯುವುದು.

'ಆಚಾರಿ' ಎಂದರೆ ಮರದ ಕೆಲಸ ಮಾಡುವವ, ಚಿನ್ನದ ಕೆಲಸ ಮಾಡುವವ, ಕಬ್ಬಿಣದ ಕೆಲಸ ಮಾಡುವವರು. ಹೊಲೆಯರಲ್ಲಿ ಬೇರೆ ಬೇರೆ ಪಂಗಡಗಳು– ಕೊರಗರು, ಮನ್ಸರೂ, ಇನ್ನೂ ಇತ್ಯಾದಿ ಜಾತಿಗಳಿವೆ. ಇವರು ಜಮೀನ್ದಾರರುಗಳ ಕೈಕೆಳಗೆ ವಂಶಪಾರಂಪರ್ಯವಾಗಿ ಜೀತದಾಳುಗಳಂತೆ ದುಡಿಯುವ ಹೊಲೆಯರು, ಒಡೆಯನ ಮನೆಯಲ್ಲಿ ಜಾನುವಾರುಗಳಿಗೆ ಹುಲ್ಲು ಹಾಕುವುದು, ಕಲಗಚ್ಚು ಕುಡಿಸುವುದು ಇತ್ಯಾದಿ ಕೆಲಸಗಳನ್ನು ಮಾಡುವರು. ಹೊಲದಲ್ಲಿ ನೀರೆತ್ತುವುದು, ಹೆಂಗಸರಿಗೆ ನೇಜಿ ನೆಡುವ ಕೆಲಸ, ಕಳೆ ಕೀಳುವುದು, ಪೈರು ಕೊಯ್ಯುವುದು, ಪೈರು ಬಡಿಯುವುದು, ಬತ್ತ ಗೇರುವುದು, ಬತ್ತ ಒಣಗಿಸುವುದು, ಗುಡ್ಡದಿಂದ ಸೊಪ್ಪು ತರುವುದು ಇತ್ಯಾದಿ.

ಗಂಡಾಳುಗಳು ಗದ್ದೆ ಉಳುವುದು, ಗದ್ದೆಯ ನೀರು ತೋಡು ಕಡಿಯುವುದು, ಹುಣಿ ಕೆತ್ತುವುದು, ಬತ್ತದ ಪೈರು ಹೊರುವುದು, ಬೈಹುಲ್ಲ ಮೂಟೆ ಹೇರುವುದು, ಅಕ್ಕಿ ಮುಡಿ ಕಟ್ಟುವುದು, ಹೀಗೆ ಅನೇಕ ಕೆಲಸಗಳನ್ನು ಮಾಡಬೇಕಾಗುತ್ತವೆ. ಇವರುಗಳು ಒಂದು ದಿನ ಬಾರದಿದ್ದರೆ ಹೇಗೆ ಯಜಮಾನ ಚಡಪಡಿಸುತ್ತಾನೆ ಎನ್ನುವುದಕ್ಕೆ ಕೆಲವು ಘಟನೆಗಳು ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತವೆ. "ಕಂಬಳದ ಮರುದಿನ ಶೂದ್ರರು ಹೆಬ್ಬಾರರ ಮನೆ ಅಂಗಳ ಏರಿಲ್ಲ. ಇತ್ತ ರುಕುಮಣಿಯಮ್ಮನಂತೂ ಕೈಕಾಲು ಆಡಿಸಲಾದಷ್ಟು ಕಂಗಾಲಾಗಿದ್ದಾರೆ. ಈ ಶೂದ್ರ ಬಿಕನಾಸಿಗಳು ತಮಗೆ ಎಷ್ಟು ಮುಖ್ಯವೆಂದರೆ ರಕ್ತನಾಳದಷ್ಟೆ ಎಂಬುದು ಆಕೆಗೆ ಮನದಟ್ಟಾಗಿದೆ"[2] ಇಂತಹ ವಿವರಗಳು ಸಿಗುತ್ತವೆ. ಇಷ್ಟೆಲ್ಲಾ ಅನುಕೂಲಗಳನ್ನು ಪಡೆದರೂ ಮೇಲ್ಜಾತಿಯವರು ಇವರನ್ನು ಪ್ರಾಣಿಗಳಂತೆ ನೋಡುತ್ತಿದ್ದರು.

ಕೆಳಜಾತಿಯವರಲ್ಲಿ ಮತ್ತೆ ಜಾತಿ ಅಂತರವಿದೆ. ಮುಸ್ಲಿಮರು ಸಾಮಾನ್ಯವಾಗಿ 'ವ್ಯಾಪಾರ' ಮಾಡುವವರು ಇವರನ್ನು ಬ್ಯಾರಿ ಎಂದು ಕರೆಯುತ್ತಾರೆ. 'ಬೊಬ್ಬರ್ಯ' ಎಂಬ ಪಾಡ್ದನವು ಬ್ಯಾರಿಯೊಬ್ಬನ ಕತೆಯನ್ನು ಒಳಗೊಂಡಿದೆ. ಆಯಾ ಜಾತಿಗಳು ಜನರು ವಾಸಿಸುತ್ತಿದ್ದ ರೀತಿಯೇ ಜಾತಿ ಪದ್ಧತಿಯನ್ನು ಪರಿಚಯಿಸುತ್ತದೆ. 'ಬ್ರಾಹ್ಮಣರು ವಾಸಿಸುತ್ತಿದ್ದುದು ಸುರಗಿ ಮಠ, ಶೆಟ್ಟರು ವಾಸಿಸುವ ಸ್ಥಳ ಗುತಿನೊಡೆಯರು ಜಾರಿಗೆ ಬೆಟ್ಟಿನ ಸುಬ್ಬಯ್ಯ ಶೆಟ್ಟರು, ಕುಳ್ಯಾಗುತ್ತಿನ ಪಾಂಡುಶೆಟ್ಟರು, ಪೊಸುಡಿ ಗುತ್ತಿನ ತೌಡಾ ಶೆಟ್ಟರು, ಹೊಲೆಯರು ಕೇರಿಗಳಲ್ಲಿ ಬದುಕುತ್ತಿದ್ದರು. ಇವು ಜಾತಿಸೂಚಕವೂ ಆಗಿ ಆಯಾ ಜಾತಿಯ ಜನರ ನಿವಾಸಸ್ಥಾನಗಳನ್ನು ನಿರ್ದೇಶಿಸುತ್ತವೆ. ಜಾತಿ-ಜಾತಿಗಳ ನಡುವಿನ ಜಾತಿ ಪದ್ಧತಿಯನ್ನು ಸಂಬಂಧಪಟ್ಟವರೆಲ್ಲ ಕಟ್ಟುನಿಟ್ಟಾಗಿ ಆಚರಿಸುವುದನ್ನು ಕಾಣುತ್ತೇವೆ. ಅಂಥ ವ್ಯವಸ್ಥೆಯೊಂದು ಈ ಕಾದಂಬರಿಯಲ್ಲಿ ಕಾಣುತ್ತೇವೆ. "ದೇವಸ್ಥಾನವೊಂದರಲ್ಲಿ ಸಹಪಂಕ್ತಿ ಭೋಜನವೂ ನಡೆಯುತ್ತದೆ. ತಾವು ಮೇಲು ಎಂದು ಬ್ರಾಹ್ಮಣರು ಆ ಪಂಕ್ತಿಯಲ್ಲಿ ಕೂರುವುದಿಲ್ಲ. ಉಳಿದ ಶೂದ್ರರು 'ತಾವು ಮೇಲು ತಾವು ಮೇಲು' ಎಂದು ಕಿತ್ತಾಡುತ್ತಾರೆ."[೮] ಜಾತಿ ವ್ಯವಸ್ಥೆ ಕರಾವಳಿ ತೀರ ಪ್ರದೇಶದಲ್ಲಿಯೂ ಇದ್ದವು. ಜಾತಿ ವ್ಯವಸ್ಥೆ ಎಲ್ಲಾ ಕಾಲದಲ್ಲೂ ಇದ್ದ ವ್ಯವಸ್ಥೆ. ಇದು ಪರಂಪರೆಯಾಗಿ ಬಂದಿದೆ.

ಕರಾವಳಿ ನೆಲಕ್ಕೆ ಪ್ರಾಕೃತಿಕ ವಿಶೇಷತೆ ಇರುವಂತೆ ವಿಶಿಷ್ಟ ಸಾಂಸ್ಕೃತಿಕ ಅನನ್ಯತೆಯೂ ಇದೆ. ಹಲವು ಭಾಷೆ, ಮತ, ಪಂಥ ಹಾಗೂ ಅರಸೊತ್ತಿಗೆಗಳ ಆಳ್ವಿಕೆಯಲ್ಲಿ ವಿಶಿಷ್ಟ ಬಂಧುತ್ವ ವ್ಯವಸ್ಥೆಯನ್ನು ರೂಪಿಸಿಕೊಂಡಿದೆ. ಬಂಧುತ್ವ ವ್ಯವಸ್ಥೆಯು ಆ ಸಮುದಾಯದಲ್ಲಿ ಬಳಕೆಯಲ್ಲಿರುವ ಮಾತೃವಂಶೀಯತೆ ಯನ್ನು ಪ್ರತಿನಿಧಿಸುತ್ತದೆ. ಕರಾವಳಿಯದು ಮುಖ್ಯವಾಗಿ ಮಾತೃಪ್ರಧಾನ ಸಂಸ್ಕೃತಿ - ಅಲ್ಲಿನ ಎಲ್ಲ ಮೂಲವಾಸಿ ಜಾತಿ ಮತ್ತು ಬುಡಕಟ್ಟುಗಳಲ್ಲಿ ಇಂದಿಗೂ ಮಾತೃರೂಪಿಯಾಗಿವೆ. ಮಾತೃಪ್ರಧಾನ ವ್ಯವಸ್ಥೆ ಎಂದರೆ ಸ್ತ್ರೀಪ್ರಧಾನವಾದದ್ದು, ಇದನ್ನು 'ತಾಯಾಳಿಕೆ', 'ಪೊಣ್ಣಾಳ್ಮೆ' ಪದ್ದತಿ ಎಂದು ಗುರುತಿಸುತ್ತಾರೆ. ಈ ವ್ಯವಸ್ಥೆಯಲ್ಲಿ ಕುಟುಂಬದ ಮೂಲರೂಪದಲ್ಲಿರುವವಳು. ಕುಟುಂಬದ ವಂಶ, ಆಸ್ತಿ, ಪ್ರರಂಪರೆ ಮತ್ತು ಉತ್ತರಾಧಿಕಾರಿಗಳು ಅನುವಂಶೀಯವಾಗಿ ತಾಯಿಯಿಂದ ಮಗಳಿಗೆ ಬರುತ್ತದೆ. ಇಲ್ಲಿ ಹೆಣ್ಣು ಹಕ್ಕನ್ನು ಪಡೆಯುವುದರಿಂದ ಗಂಡಿನ ಪ್ರಭುತ್ವವನ್ನು ಪ್ರಶ್ನಿಸುವ, ಪ್ರತಿಭಟಿಸುವ ದನಿಯನ್ನು ಪಡೆದುಕೊಳ್ಳುತ್ತಾಳೆ.

ತಾಯಾಳಿಕೆ ಪದ್ಧತಿಯನ್ನು 'ಅಳಿಯ ಸಂತಾನ ಕಟ್ಟು' ಎಂದು ಕರೆಯುತ್ತಾರೆ. ಮದುವೆಯಾದ ಹೆಣ್ಣು ಗಂಡನ ಮನೆಯಲ್ಲಿ ಖಾಯಂ ವಾಸ ಮಾಡದೆ ತನ್ನ ತವರಿನಲ್ಲಿಯೇ ಉಳಿಯುತ್ತಾಳೆ. ಅಪ್ಪನಾದವನಿಗೆ ಬೆಲೆ ಇರುವುದಿಲ್ಲ. ಈ ವ್ಯವಸ್ಥೆಯಲ್ಲಿ ಇತ್ತ ಹೆಂಡತಿಯ ಕಡೆಯೂ ಬೆಲೆ ಇರುವುದಿಲ್ಲ.

ತಾಯಿಯ ಮನೆಯಲ್ಲೂ ಸ್ಥಾನವಿರುವುದಿಲ್ಲ. ತಾಯಿಯಿಂದ ಮಗಳಿಗೆ ಅಧಿಕಾರ ಅಥವಾ ಸೋದರ ಮಾವನಿಂದ ಸೋದರ ಅಳಿಯನಿಗೆ ಅಧಿಕಾರ ಕೊಡುವುದು ಈ ವ್ಯವಸ್ಥೆಯಲ್ಲಿದೆ.

ಎಷ್ಟೇ ದೊಡ್ಡ ಗುತ್ತಿನ ಮನೆಯಾದರೂ, ಗಂಡ ಗುತ್ತಿನಾರ್ ಗುತ್ತಿನ ಒಡೆಯ ಎಂಬ ಮಹಾ ಪಟ್ಟ ಹೊತ್ತಿದ್ದರೂ ಮನೆತನದ ಆಸ್ತಿ, ಅಂತಸ್ತು ಕಾಪಾಡುತ್ತಾ ಅದಕ್ಕೆ ಶ್ರಮಿಸುತ್ತಾ, ಗುತ್ತಿನಲ್ಲಿರುವ ದೈವ ದೇವರುಗಳಿಗೆ ಕಾಲಕಾಲಕ್ಕೆ ನೇಮ – ಕೋಲ, ತಂಬಲ, ಅಗೇಲು, ಹರಕೆ, ಪೂಜೆ ಸಲ್ಲಿಸುತ್ತಾ, "ತನ್ನ ತಾಯಿ, ಸಹೋದರಿಯರು ಮತ್ತವರ ಮಕ್ಕಳ ಕೈಗೆ ತನ್ನ ಬದುಕನ್ನು ಒತ್ತೆ ಇಟ್ಟು ಅವರೆಲ್ಲರನ್ನು ನೋಡಿ ಕೊಳ್ಳಬೇಕಾದ್ದು ಈ ಗುತ್ತಿನೊಡೆಯ! ಈತ ತನ್ನ ಮಡದಿ ಮಕ್ಕಳ ಜವಾಬ್ದಾರಿಯನ್ನು ವಹಿಸಿದರೆ, "ತಟ್ಟನೆ ತಾಯಿ – ಸೋದರಿಯರು ಕುಟುಕುತ್ತಾರೆ. ಇದು ಅಳಿಯಕಟ್ಟು ಮಾರಾಯ, ನೀನು ಸಾಕಬೇಕಾಗುವುದು ನಿನ್ನ ಅಕ್ಕ ತಂಗಿಯರ ಸಂತಾನವನ್ನು".[5] ಈ ವ್ಯವಸ್ಥೆಯಲ್ಲಿ ಹೆಣ್ಣು ಒಡಹುಟ್ಟಿದವರಾದ ಅಣ್ಣಂದಿರನ್ನು, ಅಪ್ಪಂದಿರನ್ನು ತುಚ್ಛವಾಗಿ ಕಾಣುತ್ತಾಳೆ. ಈ ವ್ಯವಸ್ಥೆಯಲ್ಲಿ ಹೆಣ್ಣು ವಿಚ್ಛೇದನ ಪಡೆಯಲೂಬಹುದು, ಮರು ಮದುವೆ ಆಗಲೂ ಬಹುದು.

ಪಿತೃ ಪ್ರಧಾನ ವ್ಯವಸ್ಥೆ ಉಳ್ಳ ಬ್ರಾಹ್ಮಣ ಜಾತಿ ಮತ್ತು ಉಪಜಾತಿಗಳ ಸಾಂಸ್ಕೃತಿಕ ಒಳರಚನೆಯಲ್ಲಿ ಕಾಣುತ್ತೇವೆ. ಈ ಪದ್ಧತಿಯವರು ಗಂಡು ಮಕ್ಕಳ ಸಂತಾನ ಎಂದು ಗುರುತಿಸಿಕೊಂಡಿದ್ದಾರೆ.

ಹಿಂದಿನ ಏಳು ಮತ್ತು ಹನ್ನೆರಡನೆಯ ಶತಮಾನಗಳ ನಡುವಿನ ಅವಧಿಯಲ್ಲಿ ವಿಧವಾ ವ್ಯವಸ್ಥೆ ಸಹಗಮನ ಪದ್ಧತಿ, ಬಾಲ್ಯ ವಿವಾಹದ ಇಂತಹ ಪಿಡುಗುಗಳು ಸಮಾಜದಲ್ಲಿ ಹಿಂದೂ ಮಹಿಳೆಯ ನ್ಯಾಯಸಮ್ಮತ ಸ್ಥಾನಮಾನವನ್ನು ಕುಂಠಿತಗೊಳಿಸಿತು. ಮಹಿಳೆಯರ ಬಗ್ಗೆ ಕೆಲವು ಹೀನ ಸಂಕುಚಿತ ಭಾವನೆಗಳು ಭಾರತೀಯ ಸಮಾಜದ ಸಾಮಾಜಿಕ ಕಟ್ಟುಪಾಡುಗಳಿಗೆ ಸೇರಿಕೊಂಡವು. ಧರ್ಮಶಾಸ್ತ್ರಗಳು ವಿಧವಾ ವಿವಾಹದ ಮೇಲೆ ವಿಧಿಸಿದ್ದ ನಿಷೇಧಗಳನ್ನು ಮಧ್ಯಕಾಲೀನ ಯುಗದಲ್ಲಿ ಕಟ್ಟುನಿಟ್ಟಾಗಿ ಅನುಸರಿಸಲಾಯಿತು. ವಿಧವೆಯರು ಪುನ: ವಿವಾಹ ಮಾಡಿಕೊಳ್ಳುವ ಪ್ರಶ್ನೆಯೇ ಇರಲಿಲ್ಲ. ವಿಧವೆಯರನ್ನು ಅಮಂಗಳಕರ ವ್ಯಕ್ತಿಗಳೆಂದು ಪರಿಗಣಿಸಿ ಅವರಿಗೆ ಧಾರ್ಮಿಕ ಕ್ರಿಯೆಗಳಲ್ಲಿ ಭಾಗವಹಿಸುವ ಹಕ್ಕನ್ನು ನಿರಾಕರಿಸಿದ್ದಲ್ಲದೆ ಕುಟುಂಬದ ಪರಿಚಾರಿಕೆಯ ಕೆಲಸಕ್ಕೆ ನಿಯುಕ್ತಿ ಮಾಡಿದಂತೆ ಅವರನ್ನು ದಂಡಿಸಲಾಗುತ್ತಿತ್ತು. ಅವರ ಸಾಮಾಜಿಕ ಸ್ಥಾನಮಾನ ಅತ್ಯಂತ ನಿಕೃಷ್ಟ ಮಟ್ಟದ್ದಾಗಿತ್ತು. ಕೇಶಮುಂಡನವನ್ನು ಮಾಡಿಸುತ್ತಿದ್ದರು. ನಾಗವೇಣಿಯವರ ಕಾದಂಬರಿಯಲ್ಲಿಯೂ ಕರಾವಳಿ ತೀರ ಪ್ರದೇಶದಲ್ಲಿ ಸ್ತ್ರೀಯರು ಹೇಗೆ ಬಾಳಿ ಬದುಕಿದರು. ಸಮಾಜದಲ್ಲಿ ಅವರ ಸ್ಥಾನಮಾನಗಳೇನಿದ್ದವು. ಎಂಬುದರ ಬಗ್ಗೆ, ಅವರ ದಿಟ್ಟತನದ ಬಗ್ಗೆ ಚಿತ್ರಣಗಳು ದೊರಕುತ್ತವೆ. ಈ ಕಾದಂಬರಿಯಲ್ಲಿ ಬರುವ

ಎಲ್ಲಾ ಸ್ತ್ರೀ ಪಾತ್ರಗಳು ಪರಿಸ್ಥಿತಿಯನ್ನು ಹೇಗೆ ಎದುರಿಸುತ್ತಾರೆಂಬುದನ್ನು ಕಾಣುತ್ತೇವೆ. ಬ್ರಾಹ್ಮಣ ವಿಧವೆಯ ಬಗ್ಗೆ ಒಂದು ಚಿತ್ರಣವಿದೆ. "ಹೆಬ್ಬಾರರು ಮತ್ತೊಮ್ಮೆ ದನಿಯೆತ್ತರಿಸಿ ಕೂಗಿದರು. ಆಗಲೂ ದ್ರೌಪದಿ ಉಪ್ಪರಿಗೆಯಿಂದ ಕೆಳಗಿಳಿಯಲಿಲ್ಲ. ಮನೆಯೊಳಗಿನ ಗೌಜಿ ಗಮ್ಮತ್ತಿನಿಂದ, ಮಡಿ ಹೆಂಗಸರಿಂದ ದೂರವಿರಬೇಕೆಂದು ಬಯಸಿ ಉಪ್ಪರಿಗೆ ಏರಿದ್ದಳು"[೧೦] ಇಲ್ಲಿ ಬ್ರಾಹ್ಮಣ ವಿವಾಹಿತ ಸ್ತ್ರೀಯರಿಗಿಂತಲೂ ವಿಧವೆಯರ ಸ್ಥಿತಿ ಇನ್ನೂ ಶೋಚನೀಯವಾಗಿತ್ತು. ಏಕಾಂಗಿಯಾಗಿ ಆಕೆ ಬದುಕಿನುದ್ದಕ್ಕು ಶಿಕ್ಷೆ, ನೋವು, ಅವಮಾನಗಳನ್ನು ಎದುರಿಸಬೇಕಾಗಿತ್ತು. ಆದರೆ ಕರಾವಳಿ ತೀರದ ಬಂಟರು ಒಕ್ಕಲಿಗರು, ಸ್ತ್ರೀಯರು ಅವರ ಮಾತೃಪ್ರಧಾನ ವ್ಯವಸ್ಥೆಯಲ್ಲಿ ಮರು ಮದುವೆ ಮಾಡಿಕೊಳ್ಳಬಹುದಿತ್ತು. ವಿಚ್ಛೇದನವನ್ನು ಕೊಡಬಹುದಿತ್ತು. ಹೀಗೆ ಪರಸ್ಪರ ಒಂದೇ ಪ್ರದೇಶದ ಎರಡು ಭಿನ್ನ ಜಾತಿಯರ ಸ್ತ್ರೀಯರು ಅನುಭವಿಸುವ ನೋವು, ಯಾತನೆ ಮತ್ತು ಸಾಂಸಾರಿಕ ಬದುಕಿನ ಸುಖಗಳು ಯಾವ ರೀತಿ ಭಿನ್ನತೆಯನ್ನು ಪಡೆದಿವೆ ಎಂಬುದನ್ನು ಇಲ್ಲಿ ಸೂಕ್ಷ್ಮವಾಗಿ ವಿವೇಚಿಸಲಾಗಿದೆ. ಅಲ್ಲದೆ ಎರಡು ಸಂಸ್ಕೃತಿಯ ಸ್ತ್ರೀಯರ ಬದುಕಿನ ವಿಭಿನ್ನ ನೋಟಗಳ ಅನಾವರಣ ಇಲ್ಲಿ ಕಂಡು ಬರುತ್ತದೆ. ಒಟ್ಟಾರೆಯಾಗಿ ನಾಗವೇಣಿಯವರು ಇಲ್ಲಿ ಹೇಳ ಹೊರಟಿರುವ ಅಂಶವೆಂದರೆ ಒಬ್ಬ ಬ್ರಾಹ್ಮಣ ಸ್ತ್ರೀಗೂ ಮತ್ತು ಇತರೆ ಜಾತಿಯ ಸ್ತ್ರೀಯರಿಗೂ ಇರುವ ಪರಸ್ಪರ ಹೋಲಿಕೆ ಮತ್ತು ಭಿನ್ನತೆಯನ್ನು ತೋರಿಸುವುದು. ಅಲ್ಲದೆ ಮಾತೃ ಪ್ರಧಾನ ಕುಟುಂಬದ ವ್ಯವಸ್ಥೆಯನ್ನು ಹಾಗೂ ಈ ವ್ಯವಸ್ಥೆ ಪಡೆದಿರುವ ಪ್ರಾಮುಖ್ಯತೆಯನ್ನು ಕುರಿತು ನಾಗವೇಣಿಯವರು ಹೇಳಿದ್ದಾರೆ. ಈ ಕುಟುಂಬ ವ್ಯವಸ್ಥೆಯು ತುಳುನಾಡು, ಕೇರಳ ಪ್ರದೇಶಗಳಲ್ಲಿ ಮಾತ್ರ ಕಂಡು ಬರುತ್ತವೆ.

ಒಕ್ಕಲಾಳುಗಳ ಸ್ತ್ರೀಯರು ಗದ್ದೆಯ ಕೆಲಸ ಕಾರ್ಯಗಳಲ್ಲಿ, ಮನೆಯ ಆಗು-ಹೋಗುಗಳಿಗೆ ಪುರುಷನೊಂದಿಗೆ ಸಮಾಲೋಚಿಸುತ್ತಿದ್ದಳು, ಶೆಡ್ತಿಯರು ಅವರೇ ರಾಣಿಯರ ಜೀವನ ನಡೆಸುತ್ತಿದ್ದರು. ಇವರು ಗಂಡನ ಮೇಲೆ ಹಕ್ಕನ್ನು ಚಲಾಯಿಸುವವರಾಗಿದ್ದರು. ಈ ಕಾದಂಬರಿಯಲ್ಲಿ ಬ್ರಾಹ್ಮಣ ವಿಧವೆಯೊಬ್ಬಳ ಮರು ವಿವಾಹದ ಚಿತ್ರಣವಿದೆ. "ದ್ರೌಪದಿ ಅದ್ರಾಮನ ಮಡದಿಯಾದ ಸುದ್ದಿ ಕೇರಿ ಕೇರಿಗೂ ಹರಡಿತ್ತು. ಇದಕ್ಕೆ ಗುತ್ತಿನ ಶೆಟ್ಟರು, ಶೂದ್ರರು ಸಾಕ್ಷಿ ಇದ್ದವಂತೆ!"[೧೧] ದ್ರೌಪದಿಯ ಅಪ್ಪ ಧರ್ಮದ ಸಂಕರದಲ್ಲಿ ಅವಳನ್ನು ಕೇಶಮುಂಡನ ಮಾಡಿಸುತ್ತಿದ್ದರು. ಅವೆಲ್ಲ ಸಂಪ್ರದಾಯ ಕಟ್ಟು ಕಟ್ಟಳೆಯನ್ನು ದಾಟಿ ತನ್ನ ಪ್ರೀತಿಯನ್ನು ಅರಸುತ್ತಾಳೆ. ದ್ರೌಪದಿ ಅದ್ರಾಮನ ಜೊತೆ ಬದುಕನ್ನು ಸಾಗಿಸುತ್ತಾಳೆ. ಇಲ್ಲಿ ಸ್ತ್ರೀಯರ ಸ್ಥಾನಮಾನ ಅರಿಯಲು ಸಹಾಯ ನೀಡಬಲ್ಲ ಅಂಶಗಳನ್ನು ಕಾಣುತ್ತೇವೆ. ಶಿಖಂಡಿಯಾದ ದಾರು, ಸೂರಕ್ಕೆ, ಪುಟ್ಟಮ್ಮಕ್ಕ, ರುಕುಮಣಿಯಮ್ಮ ಈ ಪಾತ್ರಗಳು ಜೀವಂತವಾಗಿ ಪಾತ್ರಗಳಾಗಿವೆ. ಇವರು ದಿಟ್ಟತನ್ನವನು ತೋರಿಸುವ ಪತ್ರಗಳಾಗಿವೆ. ಈ ಕಾದಂಬರಿಯಲ್ಲಿ ದಾರುವಿನ

ಪಾತ್ರ ಚಿತ್ರಣವನ್ನು ಕಾಣಬಹುದು. “ಮಾರಪ್ಪ ಗಾಂಧಿ ತತ್ವಕ್ಕೆ ಪ್ರಭಾವಿತನಾಗಿ ನೋವಿನಲ್ಲಿದ್ದ ಶಿಖಂಡಿ ದಾರುವನ್ನು ಮದುವೆಯಾಗುತ್ತಾನೆ. ನಂತರ ಅವಳನ್ನು ನಿರ್ಲಕ್ಷಿಸಿದ. ಆದರೂ ದಾರು ತನ್ನ ಬದುಕನ್ನು ತೃಪ್ತಿಯಿಂದ ಸ್ವೀಕರಿಸಿದಳು. ತನಗಾಗಿ ಹೊಸ ಪ್ರಪಂಚವನ್ನು ಸೃಷ್ಟಿಸಿಕೊಂಡಳು. ತನ್ನ ನೋವನ್ನು ಮರೆಯಲು ಚರಕ ಹಿಡಿದು ನೂಲುತ್ತಿದ್ದಳು”.[೧೨]

ಸ್ತ್ರೀಯು ಮಾತೃತ್ವದ ಪ್ರತೀಕವಾಗಿ ಆಕೆ ಗೌರವದ ಸ್ಥಾನ ಪಡೆಯುತ್ತಾಳೆ. ದಾರುವಿನ ತಾಯಿ ಮಗಳು ಶಿಖಂಡಿ ಎಂದು ತಿಳಿದು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಸೂರಕ್ಕೆ ಮಗ ಮಾರಪ್ಪ ದೇಶ ಸೇವೆ ಎಂದು ಮನೆಕಡೆ ಗಮನಕೊಡುತ್ತಿರಲಿಲ್ಲ. ಆಗ ಸೂರಕ್ಕೆಯೇ ತೋಟದ ಮನೆಯ ಜವಾಬ್ದಾರಿಯನ್ನು ನೋಡಿಕೊಳ್ಳುತ್ತಾರೆ. ಇಲ್ಲಿ ಸ್ತ್ರೀಯರ ಆತ್ಮ ಸ್ಥೈರ್ಯವನ್ನು ಗುರುತಿಸಬಹುದು.

ಹೀಗೆ ನಾಗವೇಣಿಯವರ ಕಾದಂಬರಿಯಲ್ಲಿ ಸ್ತ್ರೀಯರು ಆಯಾ ಜಾತಿಗಳ ಸ್ಥಿತಿಗಳ ಪ್ರತಿನಿದಿಯಾಗಿದ್ದಾರೆ. ಒಟ್ಟಾರೆ ತಾಯಿಯಾಗಿ, ಸೋದರಿಯಾಗಿ, ಒಡತಿಯಾಗಿ, ಪ್ರೇಯಸಿಯಾಗಿ, ಕೂಲಿಯಾಳುಗಳಾಗಿ ಇಲ್ಲಿಯ ಸ್ತ್ರೀಯರು ಪ್ರೀತಿ – ಪ್ರೇಮ, ಕರುಣೆ, ನಿರಾಶೆ, ಮಾನವೀಯತೆಯನ್ನು ತೋರಿಸುವ ಜೀವಂತ ಪಾತ್ರಗಳಾಗಿ ಕಂಡು ಬರುತ್ತವೆ.

ನಿಸರ್ಗದ ಭಾಗವಾಗಿ ಬೆಳೆದ ಮಾನವನು ನಿಸರ್ಗದ ಇತರೆ ಪ್ರಾಣಿಗಳ ಜೊತೆಗೆ ಭಿನ್ನ ಭಿನ್ನ ನೆಲೆಗಳಲ್ಲಿ ಸಂಬಂಧವನ್ನು ಬೆಳೆಸಿಕೊಂಡಿದ್ದಾನೆ. ಸ್ನೇಹ ಹಾಗೂ ವಿರೋಧದ ದ್ವಂದ್ವಾತ್ಮಕ ಸಂಬಂಧವನ್ನು ಪ್ರಾಣಿಗಳ ಜೊತೆಗೆ ಸಂಬಂಧವನ್ನು ಸ್ಥಾಪಿಸಿಕೊಂಡಿದ್ದಾನೆ. ಕುಲ ದೈವವಾಗಿ, ಸ್ನೇಹಿತನಾಗಿ, ರಕ್ಷಕನಾಗಿ, ದುಡಿಮೆಗಾರನಾಗಿ, ಮಾಂತ್ರಿಕ ಶಕ್ತಿಯಾಗಿ, ದೈವಾಂಶ ಸಂಭೂತನಾಗಿ– ಹೀಗೆ ಅನೇಕ ಪ್ರಾಣಿಗಳು ಮಾನವನ ಬದುಕಿನ ಜೊತೆಗೆ ಸೇರಿಕೊಂಡಿದೆ. ಆಹಾರ ಮತ್ತು ಆರಾಧನೆ ಎಂಬ ಎರಡು ನೆಲೆಗಳಲ್ಲಿಯೂ ಪ್ರಾಣಿ ಮತ್ತು ಮನುಷ್ಯನ ಸಂಬಂಧ ಆತನ ಸಾಮಾಜಿಕ ಹಾಗೂ ಧಾರ್ಮಿಕ ಬದುಕಿನಲ್ಲಿ ಸಕ್ರಿಯವಾಗಿ ಕಾಣಿಸಿಕೊಂಡಿದೆ.

ಇಂತಹ ಪ್ರಾಣಿಗಳನ್ನು ಕುರಿತು ಅವನ ನಂಬಿಕೆಗಳು ವಿಭಿನ್ನ, ಆಚರಣೆ ಮತ್ತು ಆರಾಧನೆಗಳ ರೂಪದಲ್ಲಿ ಅಭಿವ್ಯಕ್ತಗೊಂಡಿರುವುದನ್ನು ಕಾಣಬಹುದು. ಕರಾವಳಿ ಕರ್ನಾಟಕ ಅಥವಾ ತುಳುನಾಡನ್ನು ಒಂದು ಪ್ರಾದೇಶಿಕ ಘಟಕವನ್ನಾಗಿಟ್ಟುಕೊಂಡು ಪ್ರಾಣಿಗಳನ್ನು ಬೇಟೆ, ಆಹಾರ, ಆರಾದನೆ, ಕ್ರೀಡೆ, ಬಲಿ, ವೈದ್ಯ, ಹೀಗೆ ಬೇರೆ ಬೇರೆ ಉದ್ದೇಶಗಳಿಗೆ ಬಳಸಿಕೊಳ್ಳುತ್ತಾ ಬಂದ ಕಾರಣ ಉದ್ದೇಶಗಳನ್ನು ವಿವರಿಸುವ ಪ್ರಯತ್ನ ಮಾಡಿದ್ದೇನೆ. ಜನಾಂಗದ ಸಾಮಾಜಿಕ ಜೀವನದ ಮತ್ತೊಂದು ಮುಖವು ಕೂಡ ಸಾಂಸ್ಕೃತಿಕದ್ದಾಗಿರುತ್ತದೆ. ಜನರ ಒಟ್ಟು ಬದುಕಿನ ದೃಷ್ಟಿಯನ್ನು ಅಮುಖ್ಯವೆನ್ನಬಹುದಾದ ವಿವರಗಳನ್ನು

ಅದು ತೋರಿಸುತ್ತದೆ. ಉದ್ಯೋಗ, ಆಹಾರ, ವ್ಯವಹಾರ, ಬಟ್ಟೆ ಬರೆಗಳು ಇದರಲ್ಲಿ ಒಳಗೊಳ್ಳುತ್ತದೆ. ಈ ಸಂಗತಿಗಳು ಪ್ರಾದೇಶಿಕ ವಿಶಿಷ್ಟತೆಗೆ ತಕ್ಕಂತೆ ಹವಾಮಾನ, ಮಳೆ, ಉಷ್ಣಾಂಶಗಳ ಹಿನ್ನಲೆಯಲ್ಲಿ ರೂಪಗೊಂಡಿರುತ್ತದೆ. ಪ್ರಾದೇಶಿಕ ವ್ಯತ್ಯಾಸದಿಂದಾಗಿಯೇ ಮೈತುಂಬ ಉಡುಪು ಧರಿಸುವ ಅರೆನಗ್ನನಾಗಿರುವ, ಶಾಖಾಹಾರ ಮಾಂಸಾಹಾರಗಳನ್ನು ಸೇವಿಸುವ ಭಿನ್ನತೆಗಳನ್ನು ಕಾಣುವಂತಾಗುತ್ತದೆ. ಒಬ್ಬ ಮನುಷ್ಯನ ಆಹಾರ, ಉಡುಪು, ಮನೋರಂಜನೆ, ಧಾರ್ಮಿಕ ಆಚರಣೆಗಳು ಆತ ಬದುಕಿದ ಸಮಾಜದ ಧಾರ್ಮಿಕ, ಆರ್ಥಿಕ ಅಂಶಗಳೊಡನೆ ಜೋಡಣೆಯನ್ನು ಪಡೆದುಕೊಂಡಿರುತ್ತದೆ. ತುಳುನಾಡಿನ ಪರಿಸರದ ಕಥೆಯನ್ನು ಹೊಂದಿರುವ ನಾಗವೇಣಿಯವರ ಕಾದಂಬರಿ ಇಂಥ ಎಷ್ಟೋ ವಿವರಗಳನ್ನು ತಮ್ಮೊಡಲಲ್ಲಿ ತುಂಬಿಕೊಂಡಿದೆ. ಇದರಿಂದ ತುಳುನಾಡಿನ ಪ್ರಾದೇಶಿಕತೆಯ ಬಗ್ಗೆ ಪರಿಚಯವಿಲ್ಲದವರಿಗೆ ಆ ನಾಡಿನ ಸಂಸ್ಕೃತಿಯ ಬಗ್ಗೆ ತಿಳುವಳಿಕೆಯನ್ನು ಒದಗಿಸುತ್ತದೆ. ಇಂಥ ವಿವರಗಳಿಗೆ ಸಾಂಸ್ಕೃತಿಕ ಬೆಲೆಯಿರುತ್ತದೆ.



ಸಾಮಾಜಿಕ ಚಲನೆಯ ಸನ್ನಿವೇಶದಲ್ಲಿ ಕೃಷಿ ಸಂಸ್ಕೃತಿಗೆ ಸಂಬಂಧಿಸಿದ ಅನೇಕ ಕ್ರಿಯಾಚರಣೆಗಳು ತುಳುನಾಡಿನಲ್ಲಿ ಉಳಿದುಕೊಂಡು ಬಂದಿವೆ. ಕರಾವಳಿ ಕರ್ನಾಟಕದ ದಕ್ಷಿಣ ಭಾಗದಲ್ಲಿ ನಡೆಯುವ ಓಟದ ಕೋಣಗಳ ಸ್ಪರ್ಧೆಯನ್ನು 'ಕಂಬಳ' ಎನ್ನುತ್ತಾರೆ. ಈ ಕಂಬಳಗಳು ದೀಪಾವಳಿಯ ಅನಂತರ ಆರಂಭವಾಗಿ ಶಿವರಾತ್ರಿಯ ಹೊತ್ತಿಗೆ ಮುಕ್ತಾಯವಾಗುತ್ತವೆ. ತುಳುವಿನ ಕಾಲಮಾನ ಪದ್ಧತಿಯಲ್ಲಾದರೆ ಜಾರ್ದೆ ತಿಂಗಳಿನಿಂದ ಸುಗ್ಗಿ ತಿಂಗಳ ಮಧ್ಯೆ ಜರುಗುತ್ತವೆ. ಕಂಬಳದಲ್ಲಿ ೨೦೦ ತರವಿದೆ. ಮುಲ್ಕಿಯ ಅರಸು ಕಂಬಲ, ಕದ್ರಿಯ ದೇವರ ಕಂಬಳ ಮುಖ್ಯವಾದುದು. ಕಂಬಳಕ್ಕೆ ಊರವರಿಗೆ ಸಾಂಪ್ರದಾಯಿಕ ಹಾಗೂ ಮರ್ಯಾದೆಯ ಹೇಳಿಕೆ ನೀಡಲು ಕೊರಗರು ಡೋಲು ಸಾರಬೇಕು. ಇದು ನಡೆಯಬೇಕಾದರೆ ಊರಿನ ಹಿರಿಯರು, ಮುಖ್ಯಸ್ಥರು ಸೇರಿ ಚರ್ಚಿಸಿ ನಿರ್ಧರಿಸುತ್ತಾರೆ. ಕೊರಗರನ್ನು 'ಡೋಲ ನಲಿಕೆಕುಲು' [ಡೋಲಿನ ಕುಣಿತದವರು] ಎಂದು ಕರೆಯುತ್ತಾರೆ. ಈ ಕೊರಗರು ಕಂಬಳದ ಮುನ್ನಾದಿನ ಬೆಳಗ್ಗೆ ಬೇಗ ಎದ್ದು, ಸ್ನಾನ ಇತ್ಯಾದಿಗಳನ್ನು ಮಾಡಿ, ಶುಚಿ ಭೂತರಾಗಿ, ತಮ್ಮ ಕುಲದೈವವಾದ ಕೊರಗತನಿಯ ಭೂತಕ್ಕೆ ಕೈ ಮುಗಿದು ಒಳಿತಾಗಲೆಂದು ಡೋಲು ಬಾರಿಸುತ್ತಾ ಪ್ರತಿ ಮನೆಗೆ ಹೋಗಿ ಕಂಬಳದ ಆಮಂತ್ರಣ ನೀಡುತ್ತಾರೆ. ಕಂಬಳದ ದಿನ ಅಂಗಡಿಗಳನ್ನೂ ಹಾಕುತ್ತಾರೆ. ಕಂಬಳದ ಗದ್ದೆಯ ಅಕ್ಕ ಪಕ್ಕದಲ್ಲಿ "ರಖಂ ಉಂಡೆ, ರುಕ್ಮಾಯಿ, ಕಾಮತರ ಚಕುಲಿ, ಉಂಡೆ, ಸಕ್ರೆ ಮಿಠಾಯಿ, ಖಾರದ ಅಂಗಡಿಗಳು, ಅವುಗಳ ಪಕ್ಕ ನೊಗ–ನೇಗಿಲು, ಕೊಂಡೆ–ಸೇರು, ಪಾವು, ಕಳಸೆ, ಗರಸೆ, ರೈತಾಪಿ ಸರಕಿನ ಅಂಗಡಿ, ಮಣಿಸರಕಿನ ಅಂಗಡಿ, ಕೊಲ್ಪೆಯ ಬಗೆ ಬಗೆಯ ಕತ್ತಿ, ಹಾರೆ, ಪಿಕ್ಕಾಸಿ, ಕೊಡಲಿ, ಚಾಕು, ಚೂರಿಗಳ ಅಂಗಡಿ,

ತುರಿಮಣೆ, ಶ್ಯಾವಿಗೆ ಮಣೆ, ಉಪ್ಪಿನ ಮರಿಗೆ, ಇಂಗಿನ ಮರಿಗೆ, ಚಕ್ಕುಲಿ ಅಚ್ಚಿನ ಅಂಡೆ, ಮಜ್ಜಿಗೆ ಮಂತು ಇತ್ಯಾದಿ ಅಂಗಡಿಗಳು ತಲೆಯೆತ್ತುತ್ತವೆ.

ಊರ ಮನೆಗಳಲ್ಲಿ ನೆಂಟರಿಷ್ಟರು ಬರುತ್ತಾರೆ. ಕಂಬಳಕ್ಕೆ ಮೂರು ದಿವಸವಿದೆ ಎನ್ನುವಾಗ 'ಕುದಿ ಓಡಿಸುವುದಕ್ಕೆ' ಕಂಬಳ ಗದ್ದೆಗೆ ಇಳಿಯುತ್ತಾರೆ. ಕಂಬಳ ಕಳದಲ್ಲಿ ನಾಕ್ಕೈದು ಜತೆ ಕೋಣಗಳನ್ನು ಓಡಿಸಿ ಬಿಟ್ಟು ಕಂಬಳಕ್ಕೆ ನಾಂದಿ ಹಾಕಿಸುತ್ತಾರೆ. ಕುದಿ ಓಡಿಸಿದ ನಂತರ ಕಂಬಳ ಗದ್ದೆಯ ಮಡಿ-ಮೈಲಿಗೆ ಕಾಪಾಡಬೇಕು. ಮುಟ್ಟಿನ ಹೆಂಗಸರ ನೆರಳು, ಕಂಬಳ ಗದ್ದೆಗೆ ಬೀಳಬಾರದು. ಕಂಬಳದ ಗದ್ದೆಗೆ ದಿಟ್ಟಿ ತಗಲಬಾರದೆಂದು ಗದ್ದೆಯ ಹುಣಿಗೆ ಸುತ್ತಲೂ ಜೇಡಿ ಮಣ್ಣಿಗೆ, ಕೆಮ್ಮಣ್ಣು ಸೇರಿಸಿ ಮೂರು ಮೂರು ಗೆರೆಗಳನ್ನು ಎಳೆಸಿ ಶುದ್ಧಿ ಮಾಡಿಸುತ್ತಾರೆ. ಕೋಣ ಓಡಲಿರುವ ಕಂಬಳದ ಕಳವನ್ನು ಚೆನ್ನಾಗಿ ಉತ್ತು, ಹಲಗೆ ಹಾಯಿಸಿ, ನೀರು ಕಟ್ಟಿಸಿ ನಿಲ್ಲಿಸುತ್ತಾರೆ. ಊರಿಗೆಲ್ಲ ಸುದ್ದಿ ತಿಳಿಸಿ ಕಂಬಳದ ಗದ್ದೆಯ ಸಮೀಪಕ್ಕೆ ಬರುತ್ತಾರೆ. ರಾತ್ರಿಯಾದೊಡನೆ ಕಂಬಳ ಗದ್ದೆಯಲ್ಲಿ ಹನಿಯುತ್ತಿರುವ ಇಬ್ಬನಿಯಲ್ಲಿ ಕೂತು, ಕಂಠಪೂರ್ತಿ ಕಳ್ಳು ಕುಡಿಯುತ್ತಾ ಡೋಲು ಬಾರಿಸುತ್ತಾ..... ಕುಣಿಯುತಾ, ನಲಿಯುತ್ತಾ ಮಧ್ಯೆ 'ಉರೊಳ್' ಹೇಳುತ್ತಾರೆ. ಗಂಡಸರು, ಹೆಂಗಸರು, ಮಕ್ಕಳು, ಯುವಕರು, ಸೇರುತ್ತಾರೆ. "ಹೀಗೆ ಸೇರುವ ಕೊರಗರ ಸಂಖ್ಯೆ ೪೦ ರಷ್ಟು ಇರುತ್ತದೆ. ಕೊರಗರ ಮುಖಂಡ ಕೊರಗರ ಗುಂಪನ್ನು ನಿಯಂತ್ರಿಸುತ್ತಾನೆ. ಈ ಮುಖಂಡನನ್ನು 'ಮುಕಾರಿ' ಎಂದು ಕರೆಯುತ್ತಾರೆ. ಕೊರತಿಯರು ಅಗ್ಗಿಷ್ಟಿಕೆ ಹಾಕಿ 'ಕಪ್ಪರ್ ರೊಟ್ಟಿ' ಸುಡುತ್ತಾರೆ."[೧೩] ಇದು ಬೆಳಗಿನ ಜಾವದವರೆಗೂ ನಡೆಯುತ್ತದೆ. ಕಂಬಳಕ್ಕೆ ಓಡುವ ಕೋಣಗಳನ್ನು ಮದುಮಗನ ಹಾಗೆ ಸಿಂಗರಿಸುತ್ತಾರೆ. ಕೋಣಗಳ ಕೊಂಬುಗಳಿಗೆ ಸುಣ್ಣದ ಅಡ್ಡಗೆರೆ ಎಳೆದು, ಕೊಂಬುಗಳ ತುದಿಗೆ ಒಂದೊಂದು ನಿಂಬೆಹಣ್ಣು, ಎರಡೆರಡು ಗೊಂಡೆ ಹೂವು ಸಿಕ್ಕಿಸುತ್ತಾರೆ. ಕೊರಳಿಗೆ ಹಾರ ಬಿಗಿಯುತ್ತಾರೆ. ಕಿರು ಗಂಟೆಗಳ ಹಾರವನ್ನು ಕಟ್ಟುತ್ತಾರೆ. ಕಾಲಿಗೆ ಗೆಜ್ಜೆಯನ್ನು ಕಟ್ಟುತ್ತಾರೆ. ಕೋಡುಗಳಿಗೆ ಹಿತ್ತಾಳೆಯ ಕೋಡಣಸುಗಳನ್ನು ಹಾಕಿರುತ್ತಾರೆ. ಹಣೆಗೆ ಬಿಳಿಯ ಸುಣ್ಣದ ಬೊಟ್ಟಿಡುತ್ತಾರೆ. ಅವಕ್ಕೆ ದೃಷ್ಟಿ ತಾಗದಿರಲೆಂದು ಒಕ್ಕಾಲಾಳುಗಳು ಮಂತ್ರಿಸಿದ ತಾಯಿತಗಳನ್ನು ಬಿಗಿಯುತ್ತಾರೆ. ಗ್ರಾಮೀಣ ಪ್ರದೇಶಗಳಲ್ಲಿ ನಿವಾಳಿಸುವ ಪದ್ಧತಿಗಳಿವೆ. ಕೆಟ್ಟ ಕಣ್ಣು ಬೀಳದಿರಲಿ ಎಂದು ಕಳ್ಳಿಗಿಡದ ಒಣಚೂರು, ಕಾಸರಕನ ಮರದ ಕೆತ್ತೆ, ಕಬ್ಬಿಣದ ಉಂಗುರಗಳನ್ನು ತೆಗೆದು ನಿವಾಳಿಸಿ ಹುರಿಹಗ್ಗದಲ್ಲಿ ಪೋಣಿಸುತ್ತಾರೆ. ಒಂದು ಕಬ್ಬಿಣದ ತುಂಡನ್ನು ಬಾರೊಲೆಯಲ್ಲಿ ಕಾಸಿ, ಅದನ್ನು ಬೋಗುಣಿ ನೀರಿಗೆ ಹಾಕಿ, ಆ ನೀರನ್ನು ಕೋಣಗಳಿಗೆ ಕುಡಿಸುತ್ತಾರೆ. ಕೊನೆಯಲ್ಲಿ ಕಸೂತಿಯ ಚಿತ್ತಾರವಿರುವ ಬಣ್ಣದ ಪಾವಡೆ [ಬಟ್ಟೆ] ಹಾಕುತ್ತಾರೆ. ಹಣೆಗೆ ನೆತ್ತಿಬಲ್ ಹಾಗೂ ಮೂಗುದಾರಕ್ಕೆ ಜತೆಯಾಗಿ ಒಂದು ದುಡಿಬಳ್ಳನ್ನು [ಮುಸುಡಿದಾರ] ಬಿಗಿಯುತ್ತಾರೆ.

ಕಂಬಳದ ಕೋಣಗಳ ಜೀವನ ರಾಜೋಪಚಾರದಿಂದ ಕೂಡಿರುತ್ತದೆ. ಕಂಬಳದ ಕೋಣಗಳ ಆಯ–ಪ್ರಮಾಣ ಅಳೆಯುವುದು ಕಷ್ಟ. ಕಂಬಳದ ಕೋಣದ ಸಾಕಣೆಗೆ ವರ್ಷವೊಂದಕ್ಕೆ ಒಂದೂವರೆ ಲಕ್ಷ ರೂಪಾಯಿಯ ವೆಚ್ಚ ತಗಲುತ್ತದೆ.  ಅವಕ್ಕೆ ತಿನ್ನಿಸಲೊಬ್ಬ ಆಳು ! ಮೈಯ ಮಾಲೀಶಿಗೊಬ್ಬ ಆಳು!, ಈಜಿಸಲೊಬ್ಬ ಆಳು! ಬುದ್ಧಿ ಕಲಿಸಲೊಬ್ಬ ಆಳು, ಇವರೆಲ್ಲರ ಮೇಲ್ವಿಚಾರಣೆಗಾಗಿ ಇನ್ನೊಬ್ಬ ಆಳನ್ನು ನೇಮಿಸುತ್ತಾರೆ. ಕಂಬಳದ ಕೋಣಗಳನ್ನು ನಿರ್ಮಲವಾದ ಕೊಟ್ಟಿಗೆಯಲ್ಲಿರಿಸಿ ದಿನಾ ಎಳ್ಳೆಣ್ಣೆ ಹಚ್ಚಿ, ತಿಕ್ಕಿ, ಬಿಸಿನೀರಲ್ಲಿ ಮೀಯಿಸಿ ಅವುಗಳನ್ನು ಅಂಗ ಕಸರತ್ತಿಗಾಗಿ ಕೆರೆಯಲ್ಲಿ ಅರ್ಧಗಂಟೆ ಈಜಿಸಿ, ಒಂದೆರಡು ಫರ್ಲಾಂಗ್ ನಡೆಸಿ, ಭಾಷೆ ಕಲಿಸಿದ ನಂತರ ಅವುಗಳಿಗೆ ಹೊಟ್ಟೆ ತುಂಬಾ ತಿನಿಸು ಕೊಡುತ್ತಾರೆ.

ಕಂಬಳದ ಕೋಣಗಳಿಗೆ ಭಾಷೆ ಕಲಿಸುವುದನ್ನು ಈ ಕಾದಂಬರಿಯಲ್ಲಿ ಕಾಣಬಹುದು. "ಕೂತುಕೋ" ಎಂದರೆ ಕೂರುತ್ತವೆ.  'ಎದ್ದೇಳೋ' ಅಂದರೆ ಎದ್ದು ನಿಲ್ಲುತ್ತವೆ. 'ಉಳ್ಳಾಯನಿಗೆ ಅಡ್ಡಬೀಳು' ಎಂದರೆ ಯಜಮಾನನಿಗೆ ನಮಸ್ಕರಿಸುತ್ತವೆ."[೧೪] ಕಂಬಳದ ಕೋಣಗಳು ಹೆಚ್ಚು ಒಣ ಹುಲ್ಲು ತಿನ್ನುವಂತಿಲ್ಲ; ಹೆಚ್ಚು ನೀರು ಕುಡಿಯುವಂತಿಲ್ಲ. ಒಣ ಹುಲ್ಲು ಹೆಚ್ಚು ತಿಂದರೆ ಹೊಟ್ಟೆ ಡೊಳ್ಳಾಗುತ್ತವೆ; ಹೊಟ್ಟೆ ಡೊಳ್ಳಾದರೆ ಕಂಬಳದಲ್ಲಿ ಓಡುವುದಿಲ್ಲ. ಆದ್ದರಿಂದ ಕೋಣಗಳಿಗೆ ಜಾಸ್ತಿ ಒಣಹುಲ್ಲು ನೀರು ನೀಡದೆ, ದಿನಾ ನಾಕ್ಕೈದು ಸೇರು ಅರೆ ಬೇಯಿಸದ ಹುರುಳಿಕಾಳು, ಅನ್ನದ ಅಂಬಲಿ ಜತೆಗೆ ತೆಂಗಿನ ಕಾಯಿ– ಕಡಲೆಕಾಳು, ಅವಲಕ್ಕಿ ಸೇರಿಸಿ ಬತ್ತದ ತೌಡು ಬೆರೆಸಿ ತಿನ್ನಿಸುತ್ತಾರೆ. ಅವಕ್ಕೆ ಎಳೆನೀರು, ಸಾರಾಯಿ, ಮೂಸಂಬಿ, ಬೀಟ್‌ರೂಟ್ ಗಳನ್ನೂ ಕೊಡುತ್ತಾರೆ. ಈ ಎಲ್ಲ ವಿವರಗಳೂ ಕಾದಂಬರಿಯಲ್ಲಿ ಚಿತ್ರಿತವಾಗಿವೆ.

ಕಂಬಳದಲ್ಲಿ ಕೋಣಗಳು ಸೋತರೆ ಅವುಗಳ ಬದುಕಿನ ಒಂದು ಅಂಶವನ್ನು ಕಾಣುತ್ತೇವೆ. ಮಾನವ ತನ್ನ ಪ್ರತಿಷ್ಠೆಗೆ ಮಾಡಿಕೊಂಡ ಧಾರ್ಮಿಕ ವಿಧಿಗಳು, ಮನೋರಂಜನೆಯ ಆಟಗಳು ನಂತರ ಸ್ಪರ್ಧೆಯ ಮನೋಭಾವ ತಳೆಯಿತು.  "ಕೋಣಗಳು ಕಂಬಳದ ಕಳದಲ್ಲಿ ಓಡುವ ತಾಕತ್ತು, ಸಾಮರ್ಥ್ಯ ಕಳಚಿಕೊಂಡೊಡನೆ ಅವುಗಳ ರಾಜೋಪಚಾರವೂ ನಿಂತು ಬಿಡುತ್ತದೆ. ಎಲ್ಲ ಕೋಣಗಳಂತೆ ಇವೂ ಬೀಜ ಒಡೆಸಿಕೊಂಡು ಗದ್ದೆ ಉಳುತ್ತಾ ಸಾಯಬೇಕಷ್ಟೆ".[೧೫]  ಓಟಗಳ ಸ್ಪರ್ಧೆ ಮುಗಿದ ನಂತರ ಕೊನೆಯಲ್ಲಿ ಕೋಣಗಳ ಒಡೆಯರಿಗೆ ಎಳನೀರಿನ ಮರ್ಯಾದೆ ಮಾಡುತ್ತಾರೆ. ಕಂಬಳದ ಗದ್ದೆಯ ಸುತ್ತ ಅಕ್ಕಿಯನ್ನು ಹಾಕಿದರೆ ಮಾನವರಿಗೆ ಮತ್ತು ಜಾನುವಾರಗಳಿಗೆ ಅಂಟಿದ ರೋಗ ನಿವಾರಣೆಯಾಗುತ್ತದೆಂದು ಭಾವಿಸಲಾಗಿದೆ. ಈ ಸ್ಪರ್ಧೆಯಲ್ಲಿ ಭಾಗವಹಿಸುವವರಲ್ಲಿ ಅನೇಕ ಜಾತಿಗಳ ಜನರಿದ್ದರೂ ಬಂಟರದ್ದೇ ಪ್ರಥಮ ಸ್ಥಾನ. ಬಂಟರು ಕಂಬಳದ ಜೊತೆ ಮಾನಸಿಕ ಸಂಬಂಧವನ್ನು ಹೊಂದಿದ್ದಾರೆ. ಈ ಕಂಬಳದಲ್ಲಿ

ಬರೀ ಗಂಡಸರ ಚಿತ್ರಣ ಸಿಗುತ್ತದೆ. ಬಂಟರು ಮತ್ತು ಬಿಲ್ಲವರು ಮಾತ್ರ ಮೂಲೀಯ ಕುಟುಂಬದ ವ್ಯವಸ್ಥೆಗೆ ಸೇರಿದವರು. ಅಲ್ಲಿ ಅಧಿಕಾರ ಹೆಣ್ಣಿನದು. ಪುರುಷರು ಮನೆಯ ಹೊರಗಡೆ ತಮ್ಮ ಸಾಮರ್ಥ್ಯವನ್ನು ತೋರಿಸುತ್ತಾರೆ. ಮನೆಯಲ್ಲಿ ಕಳೆದುಕೊಂಡ ಅಧಿಕಾರವನ್ನು ಹೊರಗೆ ಪಡೆದುಕೊಳ್ಳುವ ಪ್ರಯತ್ನವನ್ನು ಕಾಣಬಹುದು.

ಕಂಬಳ ಮುಗಿದ ಮೇಲೆ 'ಪೂಕರೆ ಕಂಬ' ನೆಡುತ್ತಾರೆ. "ಕಂಬಳದ ಯಜಮಾನ ಗದ್ದೆಯ ನಡುವಿನಲ್ಲಿ ಹಾಲೆರೆದು ಅದನ್ನು ಭಕ್ತಿಯಿಂದ ನೆಡುತ್ತಾನೆ. ಪೂಕರೆ ನೆಟ್ಟ ನಂತರ ಕಂಬಳದ ಗದ್ದೆಗೆ ಕೋಣಗಳು ಇಳಿಯುವಂತಿಲ್ಲ. ಇವೆಲ್ಲವನ್ನೂ ಗಮನಿಸಿದಾಗ ಸಾಮಾಜಿಕ, ಆರ್ಥಿಕ, ರಾಜಕೀಯ ಆಯಾಮವುಳ್ಳ ಆಚರಣೆಯಾಗಿದೆ.

ಕಂಬಳದ ಮಾರನೆ ದಿನ ಗದ್ದೆಯಲ್ಲಿ ನೇಜಿ ನೆಡುತ್ತಾರೆ. ನೇಜಿ ನೆಡುವಾಗ ತುಳು ಕವಿತೆಗಳು, ನೇಜಿ ಕೀಳುವಾಗ ಹೇಳುವ ಪಾಡ್ದನಗಳನ್ನು ಹಾಡುವರು. ತುಳುವರ ವಿಶಿಷ್ಟ ಸಂಪ್ರದಾಯ, ನಂಬಿಕೆ, ಮೌಲ್ಯಗಳನ್ನು ಪ್ರತಿನಿಧಿಸುವ ಮೌಖಿಕ ಪರಂಪರೆ ಪಾಡ್ದನ, ಕವಿತ ಪ್ರಕಾರಗಳು. ತುಳುನಾಡಿನ ಸಂಸ್ಕೃತಿಯು ಪಾಡ್ದನಗಳಲ್ಲಿ ವಿವರವಾಗಿ ಮತ್ತು ಸಮರ್ಪಕವಾಗಿ ತುಳು ಜನಪದಗಳಲ್ಲಿ ಸಿಗುತ್ತವೆ. ನೇಜಿ ತೆಗೆಯುವಾಗ ಸಿರಿ ಪಾಡ್ದನ, ಕೋಟಿ ಚೆನ್ನಯ್ಯರ ಪಾಡ್ದನಗಳನ್ನು ಹಾಡುತ್ತಾರೆ.

ನಿಸರ್ಗದ ಭಾಗವಾಗಿ ಬೆಳೆದ ಮಾನವರು ನಿಸರ್ಗದ ಇತರ ಪ್ರಾಣಿಗಳ ಜೊತೆಗೆ ಭಿನ್ನ ನೆಲೆಗಳಲ್ಲಿ ಸಂಬಂಧವನ್ನು ಬೆಳೆಸಿಕೊಂಡಿದ್ದಾನೆ. ಬೇಟೆಯಿಂದ ವ್ಯವಸಾಯದಂತಹ ಸರಳ ಆರ್ಥಿಕ ವ್ಯವಸ್ಥೆಗೆ ಬರುವ ಹೊತ್ತಿಗೆ ಅನೇಕ ಪ್ರಾಣಿಗಳ ಜೊತೆಗೆ ಸಂಬಂಧವನ್ನು ಸ್ಥಾಪಿಸಿಕೊಂಡಿದ್ದಾನೆ. ಕುಲದೈವವಾಗಿ, ಸ್ನೇಹಿತನಾಗಿ, ರಕ್ಷಕನಾಗಿ ದುಡಿಮೆಗಾರನಾಗಿ, ಮಾಂತ್ರಿಕ ಶಕ್ತಿಯಾಗಿ, ದೈವಾಂಶ ಸಂಭೂತನಾಗಿ ಹೀಗೆ ಅನೇಕ ಪ್ರಾಣಿಗಳು ಮಾನವನ ಬದುಕಿನ ಜೊತೆಗೆ ಸೇರಿಕೊಂಡಿವೆ. ಆಹಾರ ಮತ್ತು ಆರಾಧನೆ ಎಂಬ ಎರಡು ನೆಲೆಗಳಲ್ಲಿಯೂ ಪ್ರಾಣಿ ಮತ್ತು ಮನುಷ್ಯನ ಸಂಬಂಧ ಆತನ ಸಾಮಾಜಿಕ ಹಾಗೂ ಧಾರ್ಮಿಕ ಬದುಕಿನಲ್ಲಿ ಸಕ್ರಿಯವಾಗಿ ಕಾಣಿಸಿಕೊಂಡಿವೆ. ಬೆಳೆಗಳ ಸಂರಕ್ಷಣೆಗಾಗಿ ಮೃಗಗಳ ಬೇಟೆಯಾಡುವ ಅನಿವಾರ್ಯತೆಗೆ ಒಳಗಾದ ಸಮಾಜಗಳು ಕಾಡುಪ್ರಾಣಿಗಳ ಮಾಂಸವನ್ನು ಆಹಾರವಾಗಿ ಸೇವಿಸುವ ಸಂಸ್ಕೃತಿಯನ್ನು ಬೆಳೆಸಿಕೊಂಡು ಬಂದಿರುವುದನ್ನು ಕಾಣಬಹುದು. ಕೃಷಿ ಸಂಸ್ಕೃತಿಯನ್ನು ತಮ್ಮ ಪ್ರಧಾನ ಜೀವನ ವಿಧಾನವನ್ನಾಗಿ ಮಾಡಿಕೊಂಡ ಜನಪದ ಸಮುದಾಯಗಳೇ ಮಾಂಸಹಾರವನ್ನು ತಮ್ಮ ಆಹಾರ ವ್ಯವಸ್ಥೆಯಲ್ಲಿ ವಿಶೇಷವಾಗಿ ಅಳವಡಿಸಿಕೊಂಡಿರುವುದನ್ನು ಗಮನಿಸುತ್ತೇವೆ. ಬೇಟೆಯ ಮೂಲಕ ತನ್ನ ಆಹಾರವನ್ನು ಪಡೆಯುತ್ತಿದ್ದ ಮನುಷ್ಯ ಕ್ರಮೇಣ ಆಹಾರವನ್ನು ಉತ್ಪಾದಿಸುವುದಕ್ಕೆ ತೊಡಗಿದ. ಆಹಾರ

ವಿಚಾರದಲ್ಲಿ ಏನನ್ನು ತಿನ್ನಬೇಕು, ಏನನ್ನು ತಿನ್ನಬಾರದು ಎಂಬುದರ ಬಗೆಗೆ ಜನಪದ ಸಂಸ್ಕೃತಿಗಳು ವಿಶೇಷವಾದ ತಿಳುವಳಿಕೆಯನ್ನು ಪಡೆದುಕೊಂಡಿವೆ. ಆಹಾರ ವ್ಯವಸ್ಥೆಗೂ ಜನರ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಗೂ ನೇರವಾದ ಸಂಬಂಧವಿದೆ. ಜನರ ಆರ್ಥಿಕ ಶಕ್ತಿ ನಿರ್ದಿಷ್ಟ ರೀತಿಯ ಆಹಾರ ಪದ್ಧತಿಯನ್ನು ರೂಢಿಸಿಕೊಳ್ಳಲು ಕಾರಣವಾಗುತ್ತದೆ. ಮನುಷ್ಯರು ಬದುಕುವ ಪರಿಸರಗಳು ಕೂಡ ಆಹಾರ ವ್ಯವಸ್ಥೆಯಲ್ಲಿ ರೂಪುಗೊಳ್ಳುತ್ತವೆ. ದಕ್ಷಿಣ ಕನ್ನಡ ಜಿಲ್ಲೆಯ ಬಂಟ ಸಮಾಜದವರು ದೊಡ್ಡ ಭೂಮಾಲಿಕರು, ಕೋಳಿ ಸಾಕಾಣಿಕೆ ಇವರಲ್ಲಿ ಇರುವುದು ಕಂಡು ಬರುತ್ತದೆ. ಇಲ್ಲಿನ ಪ್ರಮುಖ ಬೆಳೆ ಬತ್ತವಾದ ಕಾರಣ ಕೋಳಿ ಸಾಕಾಣಿಗೂ ಇದು ಪೂರಕವಾಗಿದೆ. ಹೀಗಾಗಿ ಬಂಟರ ಪ್ರಮುಖ ಮಾಂಸಾಹಾರ ಕೋಳಿ ಆಯಿತು. ಬಂಟರಲ್ಲಿ ಬಹಳ ಪ್ರಮುಖವಾದ ಮತ್ತು ವಿಶೇಷವಾದ ಆಹಾರ ಕೋಳಿ ಮತ್ತು ರೊಟ್ಟಿ. ಈ ಸಾಕು ಕೋಳಿಗಳಲ್ಲಿ ವಿಶೇಷವಾದವುಗಳನ್ನು ಆರಿಸಿ ಕ್ರೀಡೆಯಲ್ಲಿ ಬಳಸಿದರು. ಕ್ರೀಡೆಯ ನಂತರದ ಉಪಯೋಗ ಆಹಾರ. "ಕೋಳಿ ಅಂಕಗಳಲ್ಲಿ ಕಾಣುವ ವಿವಿಧ ಪ್ರಕಾರಗಳಾದ ಬಯಕೆದ [ಸೀಮಂತದ ನಿಮಿತ್ತವಾಗಿ ನಡೆಸುವ ಕೋಳಿ ಅಂಕ], ಒಟ್ಟೆಪಾಲ್ [ಅಂಕದಲ್ಲಿ ಸೋತು ಹೋದ ಕೋಳಿಗಳನ್ನು ಪಾಲು ಮಾಡಿಕೊಳ್ಳುವ ಕ್ರಮ], ತಮ್ಮನೊದ ಕಟ್ಟ [ಮದುವೆಯ ನಂತರ ನಡೆಯಬಹುದಾದ ವಿಶೇಷ ಊಟದ ಪ್ರಯುಕ್ತ ನಡೆಯುವ ಕೋಳಿ ಅಂಕ]"[೧೬] ಕೋಳಿ ಅಂಕವು ಒಂದು ಜೂಜಾಗಿ ಪರಿವರ್ತಿತ ರೂಪದಲ್ಲಿ ಉಳಿದುಕೊಂಡಿದೆ. ಆರಂಭದಲ್ಲಿ ಈ ಕೋಳಿ ಅಂಕದ ಉದ್ದೇಶ ಮನೋರಂಜನೆ ಹಾಗೂ ಆಹಾರದ ಅವಶ್ಯಕತೆ ಆಗಿರುವುದು ಕಂಡು ಬರುತ್ತದೆ. ಕೋಳಿ ಕಟ್ಟದ ಅಂಕಕ್ಕೆ ಒಬ್ಬ ಹುಂಜುಗಳನ್ನು ಕಾಳಗಕ್ಕೆ ಬಿಡುವವನಾದರೆ, ಪಂದ್ಯಕಟ್ಟಲು ಒಬ್ಬ, ಹೋರಾಡಿ ಸುಸ್ತಾದ ಹುಂಜವನ್ನು ತನ್ನ ಅಂಗವಸ್ತ್ರದಿಂದ ಗಾಳಿ ಬೀಸಿ ಉಪಚರಿಸುವನೊಬ್ಬ, ಗಾಯಗೊಂಡ ಕೋಳಿಗಳಿಗೆ ಚಿಕಿತ್ಸೆ ಮಾಡುವವ, ಅವುಗಳಿಗೆ ಅಕ್ಕಿ, ನೀರು ತಿನ್ನಿಸುವವನೊಬ್ಬ, ಕಾಲಿಗೆ ಹರಿತ ಬಾಳು ಕಟ್ಟುವಂತಾ ಬೇರೆ ಬೇರೆ ಕೆಲಸಕ್ಕೆ ಬೇಕಾಗುವಂತಹವರು ಇರುತ್ತಾರೆ. ಹುಂಜಗಳನ್ನು ಸಾಕುವಾಗ ತಾಯಿ ಹೇಂಟೆಯ ಹಿಂದೆ ಬಾಲಂಗೋಚಿಯಂತೆ ಸುತ್ತುತ್ತಿರುವ ಗಂಡುಮರಿಗಳ ಚಲನವಲನ– ಚಟುವಟಿಕೆಗಳ ಮೇಲೆ ನಿಗಾವಹಿಸಿ, ವಿಶೇಷ ಎಚ್ಚರಿಕೆಯಿಂದ ಮರಿಗಳನ್ನು ಆರಿಸಬೇಕು. ಅವಕ್ಕೆ ತಿಪ್ಪೆಯ ಬದುಕನ್ನು ಪರಿಚಯಿಸಲೇ ಬಾರದು. ಹೆಣ್ಣು ಮರಿಗಳಿಂದ ದೂರವಿರಬೇಕು. ಪ್ರತ್ಯೇಕವಾದ ಗೂಡಲ್ಲಿಟ್ಟೋ, ಮರದ ನೆರಳಿನ ಏಕಾಂತದಲ್ಲಿ ಕಾಲಹರಣ ಮಾಡುವಂತೆ ಗೂಟಕ್ಕೆ ಬಿಗಿದಿಟ್ಟು ಅಲ್ಲೇ ನೀರು ತಿನಿಸುಗಳನ್ನಿಟ್ಟು ಸಾಕಬೇಕು. ಮರಿ ಹುಂಜಗಳ ಜತೆ ಹುಸಿಕಾಳಗಕ್ಕೊಡ್ಡಿ ರೋಷವುಕ್ಕುವಂತೆ ನೋಡಿಕೊಳ್ಳಬೇಕು. ಒದೆಯುವ ತಂತ್ರವನ್ನು ಕರಗತ ಮಾಡಿಸಬೇಕು. ದಿನನಿತ್ಯ ಅಕ್ಕಿ ಬತ್ತದ ಜತೆಗೆ ಬೇಯಿಸಿದ ಕೋಳಿಮೊಟ್ಟೆ ನೀಡುತ್ತಾ ಆರೈಕೆ ಮಾಡಬೇಕು. ಕೆಲವೊಮ್ಮೆ ಹಸಿರು ಹಾವನ್ನು ತೋರಿಸಿ ಹುಂಜಗಳಿಗೆ ರೋಷ

ಬರಿಸುತ್ತಾರೆ. ಇಂಥ ಜೂಜು, ಒಂದು ಸ್ಪರ್ಧೆಯಾಗಿ ಜನಪ್ರಿಯವಾಗಿದ್ದ ಅಂಕವನ್ನು ನಾಗವೇಣಿ ಅವರು ವಿವರಗಳ ಸಹಿತ ಕಾದಂಬರಿಯಲ್ಲಿ ನಿರೂಪಿಸಿದ್ದಾರೆ. ಕೋಳಿ ಅಂಕ ತೀರ ಸಾಮಾನ್ಯರ ಕ್ರೀಡೆ. ಕೂಲಿಯಾಳುಗಳು ಅಂಕದಲ್ಲಿ ಆಸಕ್ತಿ ವಹಿಸುವುದನ್ನು ಕಾಣಬಹುದು. ಇದನ್ನು ಕೃಷಿಯ ಕೆಲಸಗಳು ಕಡಿಮೆಯಿರುವಾಗ, ಇಲ್ಲವೆ ಪೂರ್ತಿ ವಿರಾಮದ ದಿನಗಳಲ್ಲಿ ಅಂಕಗಳನ್ನು ಏರ್ಪಡಿಸುತ್ತಿದ್ದರು. ಕ್ರಮೇಣ ಕೋಳಿ ಅಂಕ ಬಯಲು ಪ್ರದೇಶಕ್ಕೂ  ಹರಡಿರುವದನ್ನು ಕಾಣಬಹುದು. ಹೀಗೆ ಅನೇಕ ಪ್ರದೇಶಗಳಲ್ಲಿಯೂ ವಿವಿಧ ಪ್ರಾಣಿಗಳ ಕ್ರೀಡೆಯನ್ನು ಕಾಣುತ್ತೇವೆ.

ಸಕಲ ಜೀವಿಗಳ ತಾಣವಾದ ಭೂಮಿ ಪ್ರತಿಯೊಂದು ಜೀವಿಯ ಪಾಲಿಗೆ ತಾಯಿ ಇದ್ದಂತೆ. ತಾಯಿ ತನ್ನ ಮಗುವನ್ನು ಹೇಗೆ ಹೆತ್ತು-ಹೊತ್ತು ಸಾಕಿ ಸಲಹುವಳೋ ಹಾಗೆಯೇ ಭೂಮಿ ತನ್ನನ್ನು ಅವಲಂಬಿಸುವ ಜೀವಿಗಳ ಪಾಲಿಗೆ ಮಾತೃ ಸದೃಶಳು. ಭೂಮಿಯ ಹೊರತಾಗಿ ನಾವು ಮನುಷ್ಯರ ಜೀವನವನ್ನು ಕಲ್ಪಿಸಿಕೊಳ್ಳುವಂತೆಯೇ ಇಲ್ಲ. ನಮ್ಮ ಆಹಾರ, ವಸತಿ, ನೀರು, ಖನಿಜ ಅಷ್ಟೆ ಏಕೆ ಹುಟ್ಟಿನಿಂದ ಆರಂಭವಾಗಿ ಚಟ್ಟಕ್ಕೆ ಸಲ್ಲುವವರೆಗೆ ಸರ್ವ ಸಂಪತ್ತನ್ನು ನೀಡುವ ಭೂಮಿ ಜೀವ ಜಗತ್ತಿಗೆ ಮುಖ್ಯವಾದುದು. ನಮ್ಮನ್ನು ಹೆತ್ತು ಹೊತ್ತು ಸಾಕಿದ ತಾಯಿಗೆ ಋಣಿಯಾಗಿರುತ್ತೇವೆಯೋ ಹಾಗೆಯೇ ಭೂಮಿಗೆ ತಾಯಿಯ ಸ್ಥಾನವನ್ನು ಕೊಟ್ಟು ಪೂಜೆ, ಹಬ್ಬಗಳನ್ನಾಚರಿಸುವ ಪದ್ಧತಿಯನ್ನು ಅನಾದಿ ಕಾಲದಿಂದಲೂ ಮಾನವ ನಡೆಸಿಕೊಂಡು ಬಂದಿದ್ದಾನೆ. ಭೂಮಿಯ ಉಳುಮೆ, ಬಿತ್ತನೆ, ನಾಟಿ, ಕೊಯ್ಲು, ರಾಶಿ, ಧಾನ್ಯ ಸಂಗ್ರಹಣೆ, ಬಿತ್ತನೆ, ಹೊಸಬತ್ತ ಬೇಯಿಸುವುದು, ಹೊಸಕ್ಕಿ ಊಟ ಹೀಗೆ ಎಲ್ಲಾ ಸಂದರ್ಭಗಳಲ್ಲೂ ಮಾನವರು ಭೂಮಿ ಬೀಜ-ಪೈರು-ಧಾನ್ಯ ಅನ್ನಗಳಲ್ಲಿ ದೈವಶಕ್ತಿಗಳನ್ನು ಕಾಣುತ್ತಾರೆ. ಸಾಮಾಜಿಕ ಚಲನೆಯ ಸನ್ನಿವೇಶದಲ್ಲಿಯೂ ಕೃಷಿ ಸಂಸ್ಕೃತಿಗೆ ಸಂಬಂಧಿಸಿದಂತೆ ಅನೇಕ ಕ್ರಿಯಾಚರಣೆಗಳು ತುಳು ನಾಡಿನಲ್ಲಿ ಉಳಿದುಕೊಂಡು ಬಂದಿವೆ. ಈ ಬಗೆಯ ಆಚರಣೆಗಳಲ್ಲಿ 'ಕೆಡ್ಡಸೊ', ನೂಲು ಹುಣ್ಣಿಮೆ, ಕಡಲ ಪೂಜೆ, ಮಹಾಲಯ ಅಮಾವಾಸ್ಯೆ, ಕಾವೇರಿ ಸಂಕ್ರಾಂತಿ, ಮೀನು ಹಿಡಿಯುವ ಹಬ್ಬ, ಮಾರಿಪೂಜೆ, ಚಾಂದ್ರಮಾನ ಯುಗಾದಿ, ಸೌರಮಾನ ಯುಗಾದಿ, ತಿರುಪತಿ ತಿಮ್ಮಪ್ಪನಿಗೆ ಹರಕೆ ಹಾಕುವುದು, ಪಂಚಮಿ, ಗೋಕುಲಾಷ್ಟಮಿ, ಚೌತಿ ಹಬ್ಬಗಳನ್ನು ಕಾದಂಬರಿಗಳಲ್ಲಿ ಕಾಣಬಹುದು.

ತುಳುನಾಡಿನಲ್ಲಿ ವಿಶಿಷ್ಟವಾದ ಹಬ್ಬ 'ಕೆಡ್ಡಸ'. ಇದು ಪುಯಿಂತೆಲ್ ತಿಂಗಳ ಅಂದರೆ ಮಕರಮಾಸದ ಇಪ್ಪತ್ತೆಂಟನೇ ದಿನದ ನಡುಕೆಡ್ಡಸ ಹಬ್ಬ. ಸೌರಮಾನದ ಮಕರ ಮಾಸದಲ್ಲಿ ಇಪ್ಪತ್ತೇಳನೇ ದಿನದಿಂದ ಕುಂಭ ಸಂಕ್ರಮಣದವರೆಗೆ ಮೂರು ದಿನ ಆಚರಿಸುತ್ತಾರೆ. ಶೆಟ್ಟರ ಗುತ್ತಲ್ಲಂತೂ ಕೊಡಿಕೆಡ್ಡಸ, ನಡುಕೆಡ್ಡಸ, ಕಡೆ ಕೆಡ್ಡಸ ಹಬ್ಬವನ್ನು ಬಹಳ ವಿಜೃಂಭಣೆಯಿಂದ ಆಚರಿಸುತ್ತಾರೆ. ಈ ಮೂರು ದಿವಸವೂ

ಆಳು – ಕಾಳುಗಳಿಗೆಲ್ಲ ಹೊಟ್ಟೆ ಬಿರಿಯುವಂತಾ ಊಟ; ಅಕ್ಕಿ ಹುರುಳಿ, ಕಡಲೆ, ಹೆಸರು ಕಾಳುಗಳನ್ನು ಉಪ್ಪುನೀರು ಹನಿಸಿ ಅರೆತಾಸು ನೆನೆಸಿಟ್ಟು, ಹುರಿದು, ಕೊಬ್ಬರಿ, ತುಣುಕನ್ನು ಬೆರೆಸಿ ತಯಾರಿಸುವುದೇ 'ಕುಡು–ಅರಿ' ಇದನ್ನು ಭೂತಾಯಿಯ ಪ್ರಸಾದವೆಂದು ನೆಂಟರಿಷ್ಟರಿಗೆ, ಸಂಬಂಧಿಕರಿಗೆ, ದೈವದ ಬೀಡಾದ ತವರು ಮನೆಗೆ ಸಂಪ್ರದಾಯದಂತೆ ಕಳಿಸಿಕೊಡುವ ಪದ್ಧತಿ ಇದೆ. ನಡುಕೆಡ್ಡಸದ ದಿನ ಮಾಂಸದೂಟದ ಅಡಿಗೆಯನ್ನು ಮಾಡುತ್ತಾರೆ. ಕೆಡ್ಡಸದಂದು ಮಾಂಸಹಾರಿಗಳಾದವರು ಬೇಟೆ ಮಾಡಬೇಕು ಹಾಗೂ ಮಾಂಸದೂಟ ಮಾಡಬೇಕು ಎಂಬ ನಿಯಮವಿದೆ. ಒಂದು ವೇಳೆ ಮಾಂಸ ದೊರೆಯದಿದ್ದಲ್ಲಿ ನುಗ್ಗೆ ಹಾಗೂ ಬದನೆಕಾಯಿಯ ಪದಾರ್ಥವನ್ನಾದರೂ ತಿನ್ನಬೇಕು ಎಂಬ ನಿಯಮವಿದೆ.

'ಕೆಡ್ಡಸೊ' ಭೂಮಿತಾಯಿ ಮುಟ್ಟಿನ ಕಾಲವೆಂದು ತಿಳಿದು ತುಳುನಾಡಿನಾದ್ಯಂತ ಬ್ರಾಹ್ಮಣೇತರರು ಆಚರಿಸುವ ಹಬ್ಬ. ಮಕರ ಮಾಸದ ಇಪ್ಪತ್ತೇಳನೆ ದಿನ ಮೊದಲ ನೀರು, ಅಂದು ಶುರು ಕೆಡ್ಡಸ ಅಥವಾ ಕಡುಕೆಡ್ಡಸ. ಇಪ್ಪತ್ತೆಂಟನೇ ದಿನ – ಎರಡನೇ ನೀರು, ಇದು ನಡುಕೆಡ್ಡಸ, ಇಪ್ಪತ್ತೊಂಬತ್ತನೇ ದಿನ ಮೂರನೇ ದಿನ, ಅದು ಕಡೆ ಕೆಡ್ಡಸ. ನಾಕನೇ ದಿನ ಕುಂಭ ಸಂಕ್ರಮಣ. ಅಂದು ರಜಸ್ವಾಲೆಯಾದ ಭೂತಾಯಿ ಮಿಂದು, ಶುಚಿಯಾಗಿ ಬರುವ ದಿನ. ಭೂತಾಯಿ ಋತುಮತಿಯಾಗಿದ್ದಾಳೆ ಅದಕ್ಕೆ ಸಂಕೇತಿಕವಾಗಿ ಪ್ರಕೃತಿಯಲ್ಲಿ ಆಗುವ ಬದಲಾವಣೆಗಳು ಕಾದಂಬರಿಯಲ್ಲಿ ಕಾಣುತ್ತವೆ. ಮಕರ ಮಾಸದ ಕೊನೆಗೆ ಪ್ರಕೃತಿಯಲ್ಲಿ ಬದಲಾವಣೆಗಳಾಗಿವೆ. ಶಿಶಿರನ ಆಗಮನಕ್ಕೆ ಚಳಿಗಾಲದಲ್ಲಿ ಎಲೆ ಉದುರಿಸಿಕೊಂಡ ಮರ ಗಿಡಗಳು, ಕೆಂಬಣ್ಣದ, ಹೊಂಬಣ್ಣದ, ಹಸಿರು ಚಿಗುರೆಲೆಗಳಿಂದ ಕಂಗೊಳಿಸುತ್ತಿದ್ದರೆ ನೋಡುಗರ ಕಣ್ಣಿಗೆ ಭೂತಾಯಿ ರಜಸ್ವಾಲೆಯಾಗಿದ್ದಾಳೆ ಎಂದು ಅನಿಸುತ್ತದೆ."[೧೭] ಎಂದು ಹೇಳಿರುವುದು ಪ್ರಕೃತಿಯ ವರ್ಣನೆ ನಮಗೆ ಸಿಗುತ್ತದೆ.

ಭೂತಾಯಿ ಈ ಬಾರಿ ಮಿಂದು ಬಂದು ಅಂದೇ ಗರ್ಭವತಿಯಾಗುತ್ತಾಳೆ ಎಂಬ ಆಶಯ, ಈ ದಿನಗಳಲ್ಲಿ ಭೂತಾಯಿಯನ್ನು ಯಾರೂ ಉಳುವುದಿಲ್ಲ. ಅಗೆಯುವುದಿಲ್ಲ, ಮರಗಳಿಗೆ ಕೊಡಲಿ, ಕುಡುಗೋಲಿನ ಏಟೂ ತಗಲಿಸುವುದಿಲ್ಲ. ಚಿಗುರನ್ನು ಚಿವುಟವುದಿಲ್ಲ. ಕುಂಭ ಸಂಕ್ರಮಣದಂದು ಅಂದರೆ ಮುಟ್ಟಿನ ನಾಕನೇ ದಿನ ಹೆಂಗಸರು ಮನೆಯಂಗಳದ ಮೂಲೆ ಮೂಲೆಗಳನ್ನು ಸೆಗಣಿಯಿಂದ ಸಾರಿಸಿ, ತಾವೂ ಮಿಂದು ಬಂದು, ಭೂತಾಯಿಯ ಮೈ ಸ್ನಾನಕ್ಕಾಗಿ ತುಳಸೀಕಟ್ಟೆಯೆದುರಲ್ಲಿ ಕುಡಿಬಾಳೆ ಎಲೆ ಹಾಕಿ ಕಡಲೆ – ಹೆಸರಿನ ಹಿಟ್ಟು, ಅರಿಶಿನ, ತೆಂಗಿನೆಣ್ಣೆ, ಮಾವು–ಬೇವಿನ ಚಿಗುರು, ಹಲಸಿನ ಚಿಗುರು, ಬೇವಿನ ಚಿಗುರುಗಳನ್ನಿಟ್ಟು ದೀಪ ಹಚ್ಚಿ ಭೂತಾಯಿಗೆ ನಮಸ್ಕರಿಸಿ ಅಡ್ಡ ಬೀಳುತ್ತಾರೆ. ತಾಂಬೂಲ, ಊದುಬತ್ತಿ, ಬಾಚಣಿಕೆ, ಅರಿಶಿನ, ಕುಂಕಮಗಳನ್ನಿಡುತ್ತಾರೆ. ಮುತ್ತೈದೆಯರು ಭೂಮಿಗೆ ಎಣ್ಣೆ ಹೊಯ್ಯುತ್ತಾರೆ. ಇದೆಲ್ಲ

ಭೂತಾಯಿಯ ಸ್ನಾನಕ್ಕಾಗಿ ಹಾಗೂ ಸ್ನಾನದ ನಂತರದ ಅಲಂಕಾರಕ್ಕಾಗಿ ಹೆಂಗಳೆಯರು ಸಿದ್ಧತೆ ಮಾಡಿಕೊಳ್ಳುವರು. ಇದು ಮಿಂದು ಶುದ್ಧಳಾದ ಭೂಮಿ ತಾಯಿಯನ್ನು ಮನೆಯೊಳಕ್ಕೆ ಸ್ವಾಗತಿಸುವ ಪರಿ. ಕೆಡ್ಡಸದ ದಿನ ಹೆಣ್ಣು ರಜಸ್ವಾಲೆಯಾದರೆ ದಿನವಿಡೀ ಉಪವಾಸವಿರುತ್ತಾರೆ, ನೆಲಕ್ಕೆ ಉಗುಳಬಾರದು, ಭೂತಾಯಿಗೆ ಮೈಲಿಗೆ ಮಾಡದೆ ಹಸಿ ತೆಂಗಿನ ಸೋಗೆ ಗರಿಯ ಮೇಲೆ ಮಲಗುತ್ತಾರೆ.

ಜನಪದರು ತಾವು ಪೂಜಿಸುವ ದೇವತೆಗಳಿಗೆ ತಮ್ಮಂತೆಯೇ ಕಾಯ, ಭಾವ ವಿಕಾರಗಳನ್ನು ಅಂಟಿಸಿ ನೋಡುವ ಪರಿಯನ್ನು ಕಾಣುತ್ತೇವೆ. ಭೂಮಿತಾಯಿಯನ್ನು ಹೆಣ್ಣೆಂದು ಪರಿಭಾವಿಸಿದರು. ಭೂಮಿಯಲ್ಲಿ ಬೆಳೆತಯಬಹುದಾದ ಬೆಳೆಗಳಿಗೆ ಕಾಡುಪ್ರಾಣಿಗಳಿಂದ ಯಾವುದೇ ತೊಂದರೆ ಆಗದಿರಲಿ ಎಂದು ಕೆಡ್ಡಸದಂದು ಬೇಟೆಯಾಡುವ ಆಚರಣೆ ಬಂದಿತು. ಬೇಟೆಯು ಆಹಾರದ ಶೋಧದ ಒಂದು ಬಗೆ. ಮನುಷ್ಯ ಸಂಸ್ಕೃತಿಯ ಮುಖ್ಯ ಆಚರಣೆಗಳಲ್ಲಿ ಆಹಾರದ ಶೋಧದ ಅಂಶಗಳಿರುವುದನ್ನು ಕಾಣುತ್ತೇವೆ. ಪ್ರಾಣಿಗಳ ಹಾಗೂ ಮೀನುಗಳ ಬೇಟೆಗೆ ಸಂಬಂಧಿಸಿದ ಆಚರಣೆಗಳ ವಿವರಗಳು ಈ ಕಾದಂಬರಿಯಲ್ಲಿ ಸಿಗುತ್ತದೆ. ಮಾಯಿ ತಿಂಗಳು ಕಳೆದು ಸುಗ್ಗಿ ತಿಂಗಳು ಆರಂಭವಾದ ಮೊದಲ ದಿನ ಮೀನು ಸಂಕ್ರಮಣ. ಅದೇ ದಿನ ಸಂಜೆ ಊರ ಕೋಡ್ದಬ್ಬು ಭೂತದ ಕೋಲ. ರಾತ್ರಿ ಕೊಡ್ದಬ್ಬುವಿಗೆ 'ಅಗೆಲು ಬಡಿಸುವ ಕ್ರಮವಿದೆ. ಜಾತ್ರೆಯ ದಿನದಂದು ಬೆಳಗ್ಗೆ ದೈವದ ಪ್ರಸಾದವನ್ನು ಹೊಳೆಗೆ ಹಾಕಿ ಪ್ರಾರ್ಥಿಸಿ ನಿಗದಿತ ಮುಹೂರ್ತಕ್ಕೆ ಸರಿಯಾಗಿ ಎಲ್ಲರೂ ಒಮ್ಮೆಲೆ ಹೊಳಗೆ ಇಳಿದು ಮೀನುಗಳನ್ನು ಹಿಡಿಯುತ್ತಾರೆ. ದೈವದ ಪ್ರಸಾದವೆಂದು ನಾಕೈದು ಮನೆಗಳಿಗೂ ಮೀನು ಹಂಚುತ್ತಾರೆ. ನದಿಯ ದಡದಲ್ಲಿ ಮೀನು ಮಾರುವ ಸಂತೆಯೂ ನಡೆಯುತ್ತದೆ. ಜನರು ಹೆಚ್ಚು ಬೆಲೆ ತೆತ್ತಾದರೂ ದೈವದ ಪ್ರಸಾದ ಎಂದು ಮೀನುಗಳನ್ನು ಖರೀದಿಸುತ್ತಾರೆ. ಈ ಆಚರಣೆಯು ಗ್ರಾಮ ದೈವವಾದ 'ಉಳ್ಳಾಯ' ನ ಜಾತ್ರೆಯ ಒಂದು ಅಂಗವಾಗಿದೆ. 'ಉಳ್ಳಾಯ' ಎಂದರೆ ಒಡೆಯ. ಎಲ್ಲರನ್ನೂ ಕಾಪಾಡುವವನು ಎಂಬ ನಂಬಿಕೆ. ಮೀನುಗಳು ಉಳ್ಳಾಯನ ಅಧೀನಕ್ಕೊಳಪಟ್ಟಿದೆಯಾದ್ದರಿಂದ ಅವನ ಅಪ್ಪಣೆಯನ್ನು ಪಡೆದು ಮೀನಿನ ಬೇಟೆಯನ್ನು ಮಾಡುವ ಪರಿಯನ್ನು ಕಾಣುತ್ತೇವೆ.

ಮೂಲ, ಪೈಯ, ಕೇವಕಿ, ತ್ಯಾಡೆ, ಎಟ್ಟಿ, ಇರ್ಪೆ, ಅಬ್ರೋಣಿ, ಕಾಣಿ, ಕಿಜಾನ್ ಹಲವು ಜಾತಿಗಳನ್ನು ಈ ಸಂದರ್ಭದಲ್ಲಿ ಬೇಟೆಯಾಡಲಾಗುತ್ತದೆ ಎಂಬುದನ್ನು ಕಾದಂಬರಿಯಲ್ಲಿ ಕಾಣಬಹುದು. ಮಾರಿಪೂಜೆಯು ಒಂದು ಊರ ಹಬ್ಬ. ಈ ಹಬ್ಬಕ್ಕೆ ಮಗಳನ್ನು ತವರಿಗೆ ಕರೆತರುತ್ತಾರೆ. ಈ ಪೂಜೆಗೆ ಪ್ರತಿ ಮನೆಯಿಂದ ವಂತಿಗೆಯನ್ನು ಕೊಡುವ ಪದ್ಧತಿ ಇದೆ. ಇದನ್ನು ಬ್ರಾಹ್ಮಣರು ಸಂಗ್ರಹಿಸುತ್ತಾರೆ. ಮೂಲ್ಯ ಜಾತಿಯವನು ಮಾರಿಯ ಕೆಲಸದ ಪೂಜೆಯನ್ನು ಮಾಡುವವನು. ಈ ದೇವಿಗೆ 'ಅಗೆಲು'

ಬಡಿಸುತ್ತಾರೆ. ಕೆಲವು ಪ್ರದೇಶಗಳಲ್ಲಿ ಎಡೆಯನ್ನು ಕೊಡುವ ಪದ್ದತಿ ಇದೆ. ಜನರು ಮಾಡಿರುವ ಅಡಿಗೆಯನ್ನು ಮೊದಲು ಊರ ದೇವಿಗೆ ಬಡಿಸುವ ಪದ್ಧತಿಯಿದೆ. ಮಾರಿ ಪೂಜೆ ಮಾಡುವ ಉದ್ದೇಶ ಊರಿಗೆ ಬಂದಿರುವ ಸಂಕಷ್ಟಗಳನ್ನು, ಕ್ಷಾಮ–ಪೀಡೆ, ರೋಗ–ರುಜಿನಗಳನ್ನು ಓಡಿಸುವವಳು ಎಂದು ಜನಪದೀಯರು ನಂಬಿದ್ದರು. ಇದಕ್ಕೆ ಕೋಳಿ ಬಲಿಯನ್ನು ಕೊಡುತ್ತಾರೆ. ಸಾಮಾನ್ಯವಾಗಿ ಎಲ್ಲ ಪ್ರದೇಶಗಳಲ್ಲಿ ಊರ ಹಬ್ಬಗಳಲ್ಲಿ ಬಲಿ ಕೊಡುವ ಪದ್ಧತಿಯನ್ನು ಕಾಣುತ್ತೇವೆ.

ಅಡಿಕೆ ಮರಕ್ಕೆ ಹರಳೆಣ್ಣೆ ಸವರಿ ಮೊಸರು ತುಂಬಿದ ಮಡಿಕೆಯನ್ನು ಕಟ್ಟಿರುತ್ತಾರೆ. ಆ ಮರವನ್ನು ಹತ್ತಿ ಯಾರು ಅದನ್ನು ಪಡೆಯುತ್ತಾರೋ ಅವರಿಗೆ ಇನಾಮನ್ನು ಕೊಡುವ ಪದ್ಧತಿ ಇದೆ. ಇದನ್ನು ಭಾರತದಾದ್ಯಂತ ಈ ಪರಿಯನ್ನು ಕಾಣುತ್ತೇವೆ. ಇದನ್ನು ಗೋಕುಲಾಷ್ಟಮಿಯಂದು ಆಚರಿಸುತ್ತಾರೆ. ಇಲ್ಲಿ ಹಬ್ಬದ ಜೊತೆ ಜೊತೆಯಲ್ಲಿ ಮನೋರಂಜನೆಯ ದೃಶ್ಯವನ್ನು ಕಾಣುತ್ತೇವೆ. ಗ್ರಾಮೀಣ ಪ್ರದೇಶದ ಪರಿಸರದಲ್ಲಿ ಸುಗ್ಗಿ ಪ್ರಾರಂಭವಾಗುತ್ತಿದ್ದ ಹಾಗೆ ಒಂದೊಂದು ವಿಶಿಷ್ಟ ಆಚರಣೆಯನ್ನು ಮಾಡುತ್ತಾರೆ. ತುಳು ನಾಡಿನಲ್ಲಿ ಪುದ್ದರ್, ನೋಂಪು, ನವರಾತ್ರಿ, ಕಾವೇರಿ ಸಂಕ್ರಾಂತಿ, ದೀಪಾವಳಿ, ತುಳಸೀಪೂಜೆ, ಕಂಬಳ, ಕೋಲ, ನೇಮ, ಜಾತ್ರೆ, ಹಬ್ಬಗಳು ಸಾಲು ಸಾಲಾಗಿ ಬರುತ್ತವೆ. ಚೌತಿ ದಿನದಂದು ಕದಿರು [ತೆನೆ] ಕಟ್ಟುವ ಹಬ್ಬ, ಹೊಸ ಪೈರು ಕೊಯ್ಯುವ ಮುನ್ನ ಈ ಹಬ್ಬವನ್ನು ಆಚರಿಸುತ್ತಾರೆ. ಭತ್ತದ ಕದಿರನ್ನು ಕಿತ್ತು ತಂದು ಮನೆ ತುಂಬಿಸುವುದು ಇದರ ಸಂಕೇತ. ಈ ಭತ್ತದ ಜೊತೆಯಲ್ಲಿ ಇತರೆ ವೃಕ್ಷಗಳ ರೆಂಬೆಗಳ ಜೊತೆಯಲ್ಲಿ ಕಟ್ಟಿ ತುಳಸಿ ಕಟ್ಟೆಯ ಮೇಲೆ ಇಟ್ಟು ಪೂಜೆಯನ್ನು ಮಾಡಿ, ಅದನ್ನು ಒಳಗೆ ಎಲ್ಲ ಭಾಗಗಳಲ್ಲೂ ಕಟ್ಟುವರು. ಈ ಹಬ್ಬದಲ್ಲಿ 'ಪೊಲಿ ಪೊಲಿಯೇ' ಎಂದು ಹೇಳುತ್ತಾರೆ. ಇದರ ಅರ್ಥ. ನಮ್ಮೆಲ್ಲರಿಗೂ ಸಮೃದ್ಧಿ ಆರೋಗ್ಯ ಕೊಡು ಎಂದು ನಿಸರ್ಗ ದೇವತೆಯನ್ನು ಪ್ರಾರ್ಥಿಸುವರು.

ಕೊಯ್ಲಾದ ನಂತರ ಹೊಸ ಬೆಳೆಯ ಹೊಸ ಅಕ್ಕಿಯನ್ನು ನೆಂಟರಿಷ್ಟರು, ಕುಟುಂಬಸ್ಥರು, ನೆರೆಕೆರೆಯವರೆಲ್ಲ ಒಟ್ಟಾಗಿ ಕುಳಿತು ಉಣ್ಣುವ ಹಬ್ಬ 'ಪೊದ್ದರು' ಹಬ್ಬ. ಈ ಹಬ್ಬದ ದಿನ ಒಬ್ಬೊಬ್ಬರ ಮನೆಯಲ್ಲಿ ಒಂದೊಂದು ದಿನ ವಿಶೇಷವಾದ ಭಕ್ಷ್ಯಗಳನ್ನು ಮಾಡಿ ಸಂಬಂಧಿಕರಿಗೆ, ಊರವರಿಗೆ ಬಡಿಸುತ್ತಾರೆ. ಈ ತರ ಆಚರಣೆಗಳನ್ನು ಮಲೆನಾಡು ಪ್ರದೇಶಗಳಲ್ಲಿ ಕಾಣುತ್ತೇವೆ. ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಯ ಗ್ರಾಮೀಣ ಪ್ರದೇಶಗಳಲ್ಲಿ ಶ್ರಾವಣ ಮಾಸದಲ್ಲಿ ಈ ರೀತಿಯ ಆಚರಣೆಯು ಕಂಡು ಬರುತ್ತದೆ. ಶ್ರಾವಣದಲ್ಲಿ ನೆರೆಹೊರೆಯವರಿಗೆ ಊಟ ಹಾಕುವ ಪದ್ಧತಿ ಇದೆ. ನೂಲು ಹುಣ್ಣಿಮೆಯನ್ನು ಬ್ರಾಹ್ಮಣರು ನೂಲು ಬದಲಿಸುವ ಹಬ್ಬ. ಕೃಷಿಕರು ಬೆಳೆಗಳಿಗೆ ಪೂಜೆ ಮಾಡುವರು. ಈ ಆಚರಣೆಯು ಒಂದೊಂದು ಪ್ರದೇಶದಲ್ಲಿ ಭಿನ್ನವಾಗಿ ಕಂಡು ಬರುತ್ತದೆ. ಜನಪದೀಯರು

ನಿಸರ್ಗದಲ್ಲಿರುವ ಎಲ್ಲ ಅಂಶಗಳನ್ನು ದೈವೀ ರೂಪದಲ್ಲಿ ಕಾಣುತ್ತಿದ್ದರು ಎನ್ನುವುದಕ್ಕೆ ಈ ಹಬ್ಬ ಆಚರಣೆಗಳಿಂದ ಕಾಣುತ್ತದೆ. ನೂಲು ಹುಣ್ಣಿಮೆಯ ದಿನ ಬೆಸ್ತರು ಕಡಲನ್ನು ಪೂಜಿಸಿ ನಂತರ ಕಡಲ ದೇವಿಗೆ ಪ್ರಾರ್ಥಿಸಿ ಮೀನು ಹಿಡಿಯಲು ಇಳಿಯುವರು. ಮಹಾಲಯ ಅಮಾವಾಸ್ಯೆ ದಿನ ಪಿತೃಗಳಿಗೆ ಪೂಜೆ ಸಲ್ಲಿಸುತ್ತಾರೆ. ಹಿರಿಯರ ಪೂಜೆ ಎಂದೂ ಕರೆಯುತ್ತಾರೆ. ಹಿರಿಯರನ್ನು ಸಂತೃಪ್ತಪಡಿಸುವುದು. ತುಳುನಾಡಿನಲ್ಲಿ ರೈತಾಪಿ ವರ್ಗದ ಸಂಭ್ರಮದ ಹಬ್ಬ ತುಲಾ ಸಂಕ್ರಾತಿ. ಈ ದಿನ ಬಿತ್ತನೆಯನ್ನು ಪ್ರಾರಂಭಿಸುವರು. ಅಕ್ಕಿ ಮುಡಿಯನ್ನು ಈ ದಿನ ಕಟ್ಟುವರು. ಅಕ್ಕಿ ಮುಡಿಯನ್ನು ಮುಂದಿನ ಬಿತ್ತನೆಗೆ ಉಪಯೋಗಿಸುತ್ತಾರೆ. ಇಲ್ಲೆಲ್ಲಾ ಅವರು ಹೇಗೆ ಧಾನ್ಯಗಳನ್ನು ಶೇಖರಿಡಿಸುವ ರೀತಿ ದೈವೀ ಪದ್ಧತಿಗಳು ದೈವೀ ನೆಲೆಯಿಂದಲೇ ಮಾಡುತ್ತಿದ್ದರು.

ಚಾಂದ್ರಾಮಾನ ಯುಗಾದಿ ಆಚಾರಿ, ಕೊಂಕಣಿಗಳು ಆಚರಿಸುವರು. ಇದಾದ ನಂತರ ಸೌರಮಾನ ಯುಗಾದಿ. ಸಿಗುವ ಹಣ್ಣು ಹಂಪಲು, ತರಕಾರಿಗಳಿಗೆ ಕುಸುರಿ ಕೆತ್ತನೆ ಮಾಡಿ ಪ್ರಕೃತಿಯಮ್ಮನ ರೂಪವನ್ನು ಸೃಷ್ಟಿಸುತ್ತಾರೆ. ಭಾರತದಲ್ಲಿ ವಿವಿಧ, ಜನಾಂಗ, ಜಾತಿ, ಧರ್ಮಗಳಿದ್ದರೂ ಅವರು ಆಚರಿಸುವ ಆಚರಣೆಗಳು ವೈಶಿಷ್ಟ್ಯಪೂರ್ಣ ಹೊಂದಿದವು. ಹಬ್ಬ ಆಚರಣೆಗಳು ಜೀವನದ ಬದುಕಿಗೆ ಒಂದು ಅರ್ಥ,. ಮೌಲ್ಯಗಳನ್ನು ಕೊಡುತ್ತವೆ. ಈ ಹಬ್ಬಗಳು ಮನುಷ್ಯನ ಜೀವನಕ್ಕೆ ಸಂತೋಷ ನೀಡುತ್ತವೆ. ಈ ಹಬ್ಬಗಳು ನೋವು, ದ್ವೇಷ, ನಿರಾಸೆ, ದು:ಖ, ದುಮ್ಮಾನಗಳನ್ನು ದೂರ ಮಾಡುತ್ತವೆ. ಸಂಬಂಧಗಳನ್ನು ಗಟ್ಟಿಗೊಳಿಸುತ್ತದೆ. ಇವು ಜನರ ಸಂಸ್ಕೃತಿಯನ್ನು ಕಟ್ಟುವಲ್ಲೂ ಪಾತ್ರವಹಿಸಿವೆ. ಆ ಪ್ರದೇಶದ ಜನರು ಯಾವ ಆಚರಣೆಯನ್ನು ಮಾಡುತ್ತಾರೋ ಅದನ್ನೇ ಮುಂದುವರೆಸಿಕೊಂಡು ಬರುತ್ತಾರೆ. ಹಬ್ಬಗಳು ಸಂಪ್ರದಾಯವೂ ಆಗಿದೆ. ಒಂದು ಸಾಂಸ್ಕೃತಿಕ ಸಂವರ್ಧನೆಗೆ ಹಾಗೂ ಸಂರಕ್ಷಣೆಗೆ ಹಬ್ಬದ ಪಾತ್ರ ಮಹತ್ವಪೂರ್ಣವಾದುದಾಗಿದೆ.

ಕಾದಂಬರಿಯಲ್ಲಿ ಮತಧರ್ಮಗಳ ಬಗ್ಗೆ ಕೆಲವು ಅಂಶಗಳಿವೆ. ಮೊಗೇರರು ಕಡಲಿಗೆ ಪೂಜೆ ಮಾಡುವುದು, ಬ್ರಾಹ್ಮಣರು ಮಠಕ್ಕೆ ಹೋಗಿ ಬರುವುದು ಅವರ ಧಾರ್ಮಿಕ ಮನೋಭಾವಗಳನ್ನು ಸೂಚಿಸುತ್ತವೆ. ಮುದ್ರಾಧಾರಣೆಯನ್ನು ಮಾಡಿಸುವುದು ಪ್ರಥಮ ಏಕಾದಶಿಯಂದು. ಬ್ರಾಹ್ಮಣರು ತಾವು ಮಾಡಿದ ಪಾಪಕರ್ಮಗಳಿಗೆ ಪ್ರಾಯಾಶ್ಚಿತ್ತಕ್ಕಾಗಿ ಶಂಖ-ಚಕ್ರಗಳ ಕಬ್ಬಿಣದ ತುಂಡನ್ನು ಕಾಯಿಸಿ, ಎದೆ-ಹೊಟ್ಟೆ-ತೋಳುಗಳ ಮೇಲೆ ಮುದ್ರೆ ಹಾಕಿದರೆ, ಆ ನೋವೇ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ. ಬ್ರಾಹ್ಮಣ ಗೃಹಸ್ಥರಿಗೆ ಐದು ಮುದ್ರೆಗಳಾದರೆ, ಬ್ರಾಹ್ಮಣ ಸ್ತ್ರೀಯರ ತೋಳುಗಳಿಗೆ ಎರಡು ಮುದ್ರೆಗಳ ಧಾರಣೆಯನ್ನು ಮಾಡುವ ವಿಧಿಯಿದೆ. ಒಕ್ಕಲಾಳುಗಳು ಜುಮಾದಿ ದೈವಕ್ಕೆ ಹರಕೆ ಒಪ್ಪಿಸುವುದು. ಬ್ರಾಹ್ಮಣರು

ಏಕಾದಶಿಯಂದು ಉಪವಾಸ ಮಾಡುವುದು. ಕಂಬಳದಲ್ಲಿ ಕಂಬಳದ ದಿನ ವಿಧವೆಯರು, ಮುಟ್ಟಾದ ಹೆಂಗಸರು ಸುಳಿಯಬಾರದು. ಒಡೆಯ ಹೋಗುವಾಗ ಅಸ್ಪೃಶ್ಯರು ಎದುರಿಗೆ ಬರಬಾರದು. ಆಹಾರ ನಡವಳಿಕೆಯಲ್ಲೂ ವ್ಯತ್ಯಾಸಗಳಿವೆ. ಬ್ರಾಹ್ಮಣರು ಸಸ್ಯಹಾರಿಗಳು. ಶೂದ್ರರು ಮಾಂಸಾಹಾರಿಗಳು. ದೇವರುಗಳು ವಿಷ್ಣು, ರಾಮ,. ಸೀತೆ ಆದರೆ, ಶೂದ್ರರದು ಚಂಡಿ, ಮಾರಿ, ಭೂತ, ಇತ್ಯಾದಿ, ಬ್ರಾಹ್ಮಣರ ಹೆಸರನ್ನು ಶೂದ್ರರು ಕರೆಯುವಂತಿಲ್ಲ. ಆದರೆ ಬ್ರಾಹ್ಮಣರು ಮಾತ್ರ ಅವರನ್ನು ಹೆಸರ್ಹಿಡಿದು ಕರೆಯುತ್ತಿದ್ದರು. ಅವ ಎಷ್ಟೇ ವಯಸ್ಸಿನಲ್ಲಿ ದೊಡ್ಡವರಾದರೂ ಅಂತಸ್ತಿನಲ್ಲಿ ದೊಡ್ಡವರಾದರೂ ಸರಿ.

ಸುಮಾರು ೧೪-೧೫ನೇ ಶತಮಾನದಷ್ಟು ಹಳೆಯ ಇತಿಹಾಸವುಳ್ಳ ಭೂತಾರಾಧನೆ ಆಧುನಿಕ ಯುಗದಲ್ಲಿಯೂ ಹಳ್ಳಿಜನರ ಪರಂಪರಾಗತ ನಂಬಿಕೆಯ ಮೂಲಕ ಜೀವಂತವಾಗಿ ಉಳಿದಿದೆ. ನಿಸರ್ಗದ ಹಿಂದಿನ ಅನೇಕ ಕೌತುಕಗಳು ಮನುಷ್ಯ ಬದುಕಿನಲ್ಲಿ ಭಯ, ಆತಂಕ, ಕುತೂಹಲಗಳನ್ನು ಹುಟ್ಟಿಸಿದಾಗ ಆತನ ಬದುಕಿನಲ್ಲಿ ದೇವರು, ದೈವ, ಭೂತ ಇವುಗಳ ಕಾಣಿಸಿಕೊಂಡಿರಬೇಕು. ತನ್ನ ಬದುಕಿನ ಗತಿಯ ಹಿಂದೆ ಯಾವುದೋ ಅತೀತ ಶಕ್ತಿಯ ಕೃಪಾಡವಿದೆ ಎಂಬಂತೆ ನಂಬಿಕೊಂಡು ಬಂದ ಮಾನವ ಜನಾಂಗ ಆ ನಂಬಿಕೆಗೆ ಪೂರಕವಾದ ಅನೇಕ ಆಚರಣೆಗಳನ್ನು ಅನುಸರಿಸಿಕೊಂಡು ಬಂದಿದೆ. ಕಲ್ಪಿತ ದೇವ ಮಾನವನೋ, ಅತೀಂದ್ರಿಯ ಶಕ್ತಿಯನ್ನು ಬೆಳಸಿಕೊಂಡವರೋ ಮಾನವ ಪರಿಭಾವನೆಯಲ್ಲಿ ದೇವರಾಗುತ್ತಾರೆ. ಈ ದೇವರುಗಳ ಹಿನ್ನಲೆ ಈ ದೇಶದಲ್ಲಿ ಎಲ್ಲವನ್ನು ನಿರ್ಧರಿಸುವ ಜಾತಿಯ ನೆಲೆಯಲ್ಲಿ ಕೆಳಮಟ್ಟದಲ್ಲಿದ್ದಾಗ ಅವರುಗಳೇ 'ಕ್ಷುದ್ರದೈವಗಳು' ಇದು ಕೃಷಿ ಸಂಸ್ಕೃತಿಯಿಂದಲೇ ಹುಟ್ಟಿಕೊಂಡದ್ದು. ಕೃಷಿಗೆ ನೆಲ-ಜಲ ಎಷ್ಟು ಮುಖ್ಯವೋ ರಕ್ಷಣೆಯೂ ಅಷ್ಟೇ ಮುಖ್ಯ. ಪೂರ್ವಕಾಲದಲ್ಲಿ ಕರಾವಳಿ ಕರ್ನಾಟಕದ ಹೆಚ್ಚಿನ ಭಾಗ ಕಾಡುಗಳಿಂದಲೇ ತುಂಬಿತ್ತು. ಬಿತ್ತಿ ಬೆಳೆಸಿದ ಬೆಳೆಗೆ ಆನೆ, ಹಂದಿ, ಜಿಂಕೆ, ಕಡವೆ, ಮತ್ತಿತರ ಕಾಡು ಪ್ರಾಣಿಗಳ ಹಾವಳಿ ವಿಪರೀತವಿರುತ್ತಿತ್ತು. ರೈತರ ದನ, ಕರು, ಹೋರಿಗಳನ್ನು ಹಾಡು ಹಗಲೇ ಹೊತ್ತುಕೊಂಡು ಹೋಗುತ್ತಿದ್ದವು. ಪ್ರಕೃತಿ ವಿಕೋಪದಿಂದ ಮೃತ್ಯುಗಳು ಸಂಭವಿಸುತ್ತಿದ್ದವು. ಇದಕ್ಕೆಲ್ಲ ಪ್ರಕೃತಿಯಲ್ಲಿರುವ ಕ್ಷುದ್ರ ಶಕ್ತಿಗಳೇ ಕಾರಣ ಎಂದು ಜನರು ನಂಬಿದ್ದರು. ಈ ಕ್ಷುದ್ರ ಶಕ್ತಿಗಳ ಉಪಟಳಗಳಿಂದ ಪಾರಾಗಲು ಅವರು ಬಲಿಷ್ಠವಾದ ಶಕ್ತಿಗಳ ಆರಾಧನೆಗೆ ತೊಡಗುತ್ತಿದ್ದರು. 'ಭೂತ' ಎಂದರೆ ಕಳೆದು ಹೋದ, ಗತಿಸಿಹೋದ ಎಂಬ ಅರ್ಥ. ನಾಡಿನ ಏಳಿಗೆಗಾಗಿ, ಸತ್ಯ ಪ್ರತಿಪಾದನೆಗಾಗಿ, ಶೋಷಣೆಯ ವಿರುದ್ಧ ಹೋರಾಟ ನಡೆಸಿ ಅಪಮೃತ್ಯುವಿನಲ್ಲಿ ಗತಿಸಿ ಹೋದವರು ದೈವಗಳಾಗುತ್ತಾರೆ ಎಂಬುದು ಇಲ್ಲಿನ ಜನರ ನಂಬಿಕೆ. ಕಲ್ಕುಡ-ಕುಲ್ಲುರ್ಟಿ, ಕೋಟಿ - ಚನ್ನಯ್ಯ, ಕೊರಗ-ತನಿಯ ಕೋಡ್ದಬ್ಬು - ಬಾರಗ, ಬೊಬ್ಬರ್ಯ ಇವರೆಲ್ಲ ಮನುಷ್ಯ ಸಂಬಂಧೀ ದೈವಗಳು.

ಇಲ್ಲಿನ ಮೂಲ ನಿವಾಸಿಗಳ ಕುಲ ಲಾಂಛನಗಳಾದ ಹಂದಿ, ಕೋಣ, ಹುಲಿ ಮುಂತಾದವುಗಳು ಕ್ರಮೇಣ ಭೂತರೂಪ ತಾಳಿ ಪಂಜುರ್ಲಿ ಮಯಿ ಸಂದಾಯ, ಪಿಲಿ ಭೂತಗಳಾದುದೂ ಇದೆ. ಭೂತರಾಧನೆಯು ಅವಿಭಾಜಿತ ದಕ್ಷಿಣ ಕನ್ನಡ ಜಿಲ್ಲೆ ಹಾಗೂ ಕಾಸರಗೋಡು ಜಿಲ್ಲೆಗಳಲ್ಲಿ ಪ್ರಬಲವಾಯಿತು. ವಿಜಯನಗರದ ಅರಸರ ಆಳ್ವಿಕೆಯಲ್ಲಿ ಭೂತಾರಾಧನೆ ಹೆಚ್ಚು, ಪ್ರಚಾರಕ್ಕೆ ಬಂತು, ನೆಲ್ಕೆ, ಪಾಣಾರ. ಪರವ, ಪಂಬದ, ಮಲವ ಮುಂತಾದ ಜಾತಿಯವರು ಭೂತನರ್ತನವನ್ನು ಒಂದು ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಭೂತಗಳ ಹುಟ್ಟು, ಬೆಳವಣಿಗೆ, ಪವಾಡ ಪ್ರಸರಣಗಳು ಪಾಡ್ದನಗಳ ಮೂಲಕ ದೊರೆಯುತ್ತವೆ.

ಭೂತರಾಧನೆ ಮಾಡುವಾಗ ಊರಿನ ಪ್ರಮುಖರ ಒಪ್ಪಿಗೆಯನ್ನು ಪಡೆಯುತ್ತಾರೆ. ಒಂದು ಶುಭ ದಿನಗೊತ್ತು ಮಾಡುತ್ತಾರೆ. ಬಾಳೆಗೊನೆ ಕಡಿಯುವ ವಿಧಿ ಪ್ರಾರಂಭ. ಈ ಕೋಲಕ್ಕೆ ಕೊರಗ ಜನಾಂಗದ ಹರಿಕಾರ, ಪೂಜಾರಿ, ಮುನ್ಸಾರಿಗಳು ಕೋಲದ ಸಿದ್ಧತೆಯನ್ನು ಮಾಡುವರು. ಆ ಜಾಗವನ್ನು ಶುದ್ಧೀಕರಣ ಮಾಡುವುದು ಅಲ್ಲಿ ಚಪ್ಪರ ಹಾಕುವುದು, ಕೋಳಿ ಅಂಕ ನಡೆಸುವುದು ಕೋಲದ ವಿಧಿ, 'ಸಿಂಗದನ' ಅಂಥರೆ ಗರ್ಭ ಗುಡಿ ಕಟ್ಟುವುದು. 'ಬಲಿಪೀಠ' ದ ಸಿದ್ಧತೆ, ಈ ಎಲ್ಲವೂ ಭೂತಾರಾಧನೆಯ ಸಂಪ್ರದಾಯ. ಭೂತಾರಾಧನೆಯ ದಿನ ಎಲ್ಲರೂ ತಮ್ಮ ತಮ್ಮ ಹರಕೆ ಒಪ್ಪಿಸುವರು. ಮತ್ತು ಅಷ್ಟೇ ಭಯ ಭಕ್ತಿಯಿಂದ ಈ ಆಚರಣೆಯನ್ನು ಮಾಡುವರು ಭೂತಾರಾಧನೆ, ಎಲ್ಲರನ್ನೂ ಒಗ್ಗೂಡಿಸುತ್ತದೆ. ಆದರೆ ಮನುಷ್ಯ ಜಾತೀಯತೆಯನ್ನು ಭಿನ್ನವಾಗಿ ಕಾಣುತ್ತಾನೆ. ಇವೆಲ್ಲ ಜನಪದರು ರೂಪಿಸಿಕೊಂಡಂತಹ ಆಚರಣೆಗಳು. ಇವೆಲ್ಲ ಜನಪದರ ಹಾಡು, ಕುಣಿತಗಳ ಮೂಲಕ ಅವುಗಳಲ್ಲಿ ಅಡಗಿರುವುದನ್ನು ಕಾಣುತ್ತೇವೆ. ಶೋಷಣೆ, ದುಡಿಮೆ, ಹುಟ್ಟು ಸಾವು, ಕುಣಿತ, ಹೀಗೆ ಅನೇಕ ಸಂಗತಿಗಳನ್ನು ತುಳುವರ ಹಾಡು, ಕತೆ, ಕುಣಿತಗಳ ಮೂಲಕ ಪ್ರತ್ಯಕ್ಷಗೊಂಡಿವೆ. ಕುಣಿತಗಳ ಹಾಡುಗಳಲ್ಲಿ ಮಾನವೀಯ ಸಂಬಂಧಗಳ ನೆಲೆಯನ್ನು ಕಾಣಬಹುದು. 'ಆಟಿ ಕಳಂಜ' ಕುಣಿತದಲ್ಲಿ ಬಡತನದ ಚಿತ್ರಣವನ್ನು ಕಾಣುತ್ತೇವೆ. 'ತೆಂಬರೆ ಕುಣಿತ' ದಲ್ಲಿ ಅಣ್ಣ ತಂಗಿಯರ ಸೋದರ ವಾತ್ಸಲ್ಯವಿರುವುದನ್ನು ಕಾಣುತ್ತೇವೆ. 'ಕಂಗಿಲು ಕುಣಿತ' ದಲ್ಲಿ ಊರ ಮಾರಿಯನ್ನು ಖುಷಿಪಡಿಸಿ, ರೋಗ, ಪೀಡೆಗಳನ್ನು ಊರಿಂದ ದೂರು ಕರೆದುಕೊಂಡು ಬರುವುದು. ಈ ಕುಣಿತಗಳ ವೈಶಿಷ್ಟ್ಯ. ಮುಂಡಾಲರು, ಗೊಡ್ಡರು, ನಲ್ಕೆಯವರು ವೇಷ ಹಾಕಿ ಮನೆ ಮನೆಗೆ ಹೋಗಿ ಕುಣಿದು ಅವರಿಂದ ದವಸ ಧಾನ್ಯ ಸಂಗ್ರಹಿಸುತ್ತಾರೆ. ಜಾತಿ ಸಂಘರ್ಷ, ಶೋಷಣೆ, ಹುಟ್ಟು, ಸಾವು, ದುಡಿಮೆ, ಕುಟುಂಬ ರಚನೆ – ಹೀಗೆ ಅನೇಕ ಸಂಗತಿಗಳ ಕುರಿತಂತೆ ತುಳುವರ ಧೋರಣೆಗಳು ಹಾಡು, ಕತೆ, ಕುಣಿತಗಳ ಮೂಲಕ ಪ್ರಕಟವಾಗಿವೆ. ಜಾನಪದರು ಓದು ಬರಹ ಬಾರದಿದ್ದರೂ ತಮ್ಮ ಆಚರಾಣಾತ್ಮಕ ಕುಣಿತಗಳ ಮೂಲಕ ಪರ್ಯಾಯ ಸಂಸ್ಕೃತಿ ಮತ್ತು

ಇತಿಹಾಸವನ್ನು ಕಟ್ಟುತ್ತಾ ಬಂದಿದ್ದಾರೆ. ಮಾನವೀಯ ಕಾಳಜಿಗಳು ಕುಣಿತಗಳ ಹಾಡುಗಳಲ್ಲಿ ಕಾಣಬಹುದು. ಅನ್ಯಾಯದ ವಿರುದ್ಧ, ಶೋಷಣೆಯ ವಿರುದ್ಧ, ಮೇಲ್ವರ್ಗದ ವಿರುದ್ಧ, ಜಮೀನ್ದಾರಿ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಿದ ವಿಧಾನಗಳನ್ನು ಕುಣಿತಗಳಿಂದ ಕಂಡುಕೊಳ್ಳಲು ಸಾಧ್ಯವಿದೆ. ಬಡತನ, ಹಸಿವು, ಗಂಡು ಹೆಣ್ಣಿನ ಸಂಬಂಧ, ಜೀವನ ವಿಧಾನ, ಕೃಷಿ ಪದ್ಧತಿ – ಹೀಗೆ ಲೌಕಿಕ ಜಗತ್ತಿನ ನೂರಾರು ವಿಷಯಗಳ ಕುರಿತಂತೆ ಕಲಾವಿದರು ಕುಣಿತಗಳ ಮೂಲಕ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. 'ಆಟಿ ಕಳಂಜ' ಕುಣಿತದಲ್ಲಿ ಬಡತನದ ಚಿತ್ರಣವಿದೆ. 'ತೆಂಬರೆ ಕುಣಿತ' ದಲ್ಲಿ ಏಳು ಜನ ಅಣ್ಣಂದಿರು ಮತ್ತು ತಂಗಿಯ ಚಿತ್ರಣವಿದೆ. 'ಕಂಗಿಲು ಕುಣಿತ' ದಲ್ಲಿ ಮಾರಿಯನ್ನು ಖುಷಿಪಡಿಸಿ, ರೋಗ ಪೀಡೆಗಳನ್ನು ಊರಿಂದ ದೂರ ಮಾಡುವುದು. ಒಂದೊಂದು ಪ್ರದೇಶದ ಭಿನ್ನ ಭಿನ್ನ ಕುಣಿತಗಳು ಬದುಕಿನ ಮಹತ್ವವಾದ ಚಿತ್ರಣವನ್ನು ಕೊಡುತ್ತವೆ.

ಪ್ರತಿಯೊಂದು ಜನಾಂಗದಲ್ಲಿ ಹಲವಾರು ತೆರನಾದ ಸಂಸ್ಕಾರ ವಿಧಿಗಳು ಇರುತ್ತವೆ. ಮಾನವನ ಹುಟ್ಟಿನಿಂದ ಸಾವಿನವರೆಗೂ ಭಿನ್ನ ಭಿನ್ನ ರೂಪಗಳಲ್ಲಿ ಕಾಣಿಸುತ್ತವೆ. ನಾಗವೇಣಿಯವ ಕಾದಂಬರಿಯಲ್ಲಿ ತುಳು ನಾಡಿನ ನಾನಾ ಮುಖಗಳ ಅಧ್ಯಯನಕ್ಕೆ ಸಮೃದ್ಧವಾದ ವಸ್ತು ವಿವರಗಳನ್ನು ಒದಗಿಸುತ್ತವೆ. ವಿಧಿ ಸಂಸ್ಕಾರ ಮಾಡುವುದನ್ನು ತುಂಬ ವಿವರವಾಗಿ ಹೇಳಿದ್ದಾರೆ. ವಿಧಿ ಸಂಸ್ಕಾರ ಮಾನವನ ನಂಬಿಕೆಯ ಒಂದು ಭಾಗ. ಸಂಬಂಧಿಕರು ಸತ್ತರೆ ಮತ್ತೆ ಹುಟ್ಟಿ ಬರುವನು ಎಂಬ ನಂಬಿಕೆಯೂ ಇದೆ. ಒಂದೊಂದು ಜಾತಿಯಲ್ಲಿ ಅವರದೇ ಆದ ಆಚರಣೆಗಳಿವೆ. ಕೆಲವರಲ್ಲಿ ಹೂಳುವ ಪದ್ದತಿ ಇದ್ದರೆ, ಕೆಲವರಲ್ಲಿ ಸುಡುವ ಪದ್ಧತಿ ಇದೆ. ತುಳುನಾಡಿನಲ್ಲಿ ಸತ್ತಾಗ ಕ್ರಿಯೆ ಮಾಡುವುದರಿಂದ ಪ್ರೇತಾತ್ಮವನ್ನು ಹಿಂದಿರುಗಿಸುವರೆಗೆ ವಿಷಯ ದಾಖಲಾಗಿದೆ. ಮೂರನೇ ದಿನ ಮಾಡುವ ಕ್ರಿಯೆಗೆ ಬೂದ್ಯೊಪ್ಪ ವಿಧಿ ಆಚರಣೆ. ಹದಿಮೂರನೇ ದಿನ ಮಾಡುವ ಕ್ರಿಯೆ 'ಬೊಜ್ಜದ ದಿನ'. ಬಾಳೆ – ಕುಂಬಳ ಕಡಿಯುವುದು ಈ ವಿಧಿಯ ಆರಂಭ ಕ್ರಿಯೆ. ತುಳು ನಾಡಿನಲ್ಲಿ ಹೆಣ್ಣು ಸತ್ತರೆ ತೌರುಮನೆಯವರು ಒಳಗೆ ಸೇರಿಸಿಕೊಳ್ಳುವ ಈ ಕ್ರಿಯೆ ಮೊಡಪೊಜ್ಜ. ವಿಧಿ ಸಂಸ್ಕಾರಗಳೂ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನ ಭಿನ್ನ ರೂಪಗಳಲ್ಲಿವೆ.

ಅಳಿಯ ಕಟ್ಟು ಸಂತಾನದಲ್ಲಿ ಗಂಡ ಬಡಿಸುವಂತಿಲ್ಲ. ಬೊಜ್ಜದ ಊಟ ಹಾಕುತ್ತಾರೆ. ರಾತ್ರಿ ಮೊಡಪ್ಪೊಜ್ಜದ ಕಾರ್ಯ ಸತ್ತಾಕೆಯ ಪ್ರೇತಾತ್ಮವನ್ನು ಒಳಕರೆದುಕೊಳ್ಳುವ ಕ್ರಿಯೆ. ಸಂಜೆ ಮಡಿವಾಳ ಗುರ್ಜಿ, ದೇಗುಲಗೂಡನ್ನೆಲ್ಲ ಬಿಚ್ಚುತ್ತಾರೆ. ಅಂಗವಸ್ತ್ರವನ್ನು ಮೊಡಪ್ಪೊಜ್ಜದ ಕ್ರಿಯೆಗಾಗಿ ಇರಿಸುತ್ತಾರೆ. ಸತ್ತಾಕೆಯ ಕುಟುಂಬಸ್ಥರು, ಗಂಡು ಮಕ್ಕಳು ಅಡುಗೆ ಮನೆಯಲ್ಲಿ ತುದಿ ಬಾಳೆ ಹಾಕಿ ಅನ್ನ, ಕೋಳಿಪಲ್ಯ, ಅಕ್ಕಿ ಪುಂಡಿ, ಮೀನಿನ ಸಾರು ಬಡಿಸಿ, ಅದರ ಪಕ್ಕಕ್ಕೆ ಮಣೆಯಲ್ಲಿ ಅಂಗವಸ್ತ್ರದ ಮೇಲೆ ಎಲೆ ಅಡಿಕೆ ಹಾಗೂ

ವಿಭೂತಿಯನ್ನಿಡುತ್ತಾರೆ. ಒಂದು ಕಂಚಿನ ಚೊಂಬಲ್ಲಿ ನೀರು ದೀಪ ಹಚ್ಚುತ್ತಾರೆ. ತವರು ಮನೆಯವರು ಪ್ರೇತಾತ್ಮದೊಂದಿಗೆ ಸಂಭಾಷಣೆ ನಡೆಸುತ್ತಾರೆ. ತವರು ಮನೆಯಿಂದ ಗಂಡನ ಆಸರೆಗಾಗಿ ಬಂದಿರುವ ನಿನಗೆ ಪ್ರೀತಿ ಗೌರವದಿಂದ ಅಗೆಲು ಬಡಿಸಿದ್ದೇವೆ. ಲೋಪ ದೋಷ ನಡೆದಿದ್ದರೆ ದೈವತ್ವಕ್ಕೇರಿದ ನೀನು ಒಡಲಿಗೆ ಹಾಕಿಕೋ ಎಂದು ಪ್ರಾರ್ಥಿಸುತ್ತಾರೆ. ಹದಿನಾರನೇ ದಿನ ತವರಿನ ಮನೆಯವರು ಒಳಸೇರಿಸಿಕೊಳ್ಳುತ್ತಾರೆ.

ಆಧುನಿಕ ಸಂಪರ್ಕ ಸಾಧ್ಯತೆಗಳು ಸಹಜವಾಗಿ ಕೈಗೆಟುಕುವ ಇಂದಿನ ದಿನಗಳಲ್ಲಿ ಮಲೆನಾಡು, ಕರಾವಳಿ, ಬಯಲು ಪ್ರದೇಶಗಳ ಜನರ ಆಹಾರ ಪಾನೀಯ ಸಾಕಷ್ಟು ಭಿನ್ನತೆಯನ್ನು ಕಾಣಬಹುದು. ಇಲ್ಲಿಯ ಬ್ರಾಹ್ಮಣರು ಅಪ್ಪಟ ಶಾಕಾಹಾರಿಗಳಾಗಿದ್ದರು. ಅಕ್ಕಿ ಮುಖ್ಯ ಆಹಾರ, ಬ್ರಾಹ್ಮಣೇತರರು ಮಾಂಸಹಾರಿಗಳಾಗಿದ್ದರು. ಕಂಬಳ, ಕೋಳಿ ಅಂಕ, ಇತರ ಹಬ್ಬಗಳಲ್ಲಿ ವಿಶೇಷ ಸಂದರ್ಭದಲ್ಲಿ ವಿಶೇಷ ಅಡಿಗೆ ಮಾಡುತ್ತಿದ್ದುದು ತಿಳಿಯುತ್ತದೆ. ಮೂಡೆ ತುಳುನಾಡಿನ ಜನಪ್ರಿಯ, ಪ್ರತಿಷ್ಠೆಯ ತಿಂಡಿ. ಅದನ್ನು ಮಾಡಲು ಮುಂಡೇವ ಪೊದೆಗಳಿಂದ ಅದರ ಎಲೆಗರಿ ಕೊಯ್ದು ತಂದು, ಮುಳ್ಳು ಕೆರೆದು, ಆ ಎಲೆಗಳನ್ನು ಬೆಂಕಿಯಲ್ಲಿ ಬಾಡಿಸಿ ಮೆದುಗೊಳಿಸಿ, ಅವುಗಳನ್ನು ಮತ್ತೆ ಚಂದ್ರಿಕೆ ಸುತ್ತಿಟ್ಟು, ಉದ್ದನೆಯ ಲೋಟೆಯಾಕಾರದ ಕೊಟ್ಟೆ ಕಟ್ಟಿ ಅಕ್ಕಿ ಉದ್ದು ಹಿಟ್ಟು ಹಾಕಿ ಹಬೆಯಲ್ಲಿ ಬೇಯಿಸುತ್ತಾರೆ.

ಕಂಬಳದಲ್ಲಿ ಚೀನಿಕಾಯಿ ಸಾಂಬಾರು, ಮಜ್ಜಿಗೆ ಹುಳಿ, ಪರಮಾನ್ನ, ಸಿಹಿ ಪಲ್ಯ, ಹರಿವೆ ಸಾಸ್ಮಿ, ತಿಮರೆ ತುಂಬ್ಳಿ ಇಂತಹ ವಿಶಿಷ್ಟವಾದ ಭಕ್ಷ್ಯಗಳ ವಿವರಗಳಿವೆ.

ಪಕ್ಷಿಗಳ ಹೆಸರೂ ಇವೆ. ಇಲ್ಲಿ ಪ್ರಾಣಿ ಪಕ್ಷಿಗಳು ಒಂದು ಮಾನವನ ಜೀವನದ ಅವಿಭಾಜ್ಯ ಅಂಗವಾಗಿವೆ. ಕಾಗೆ, ಕೋಗಿಲೆ, ಮಿಂಚುಳ್ಳಿ, ರಾಮಗಿಳಿ, ಕಾಗಿಮಿಂಡ, ಮೈನಾ ಇತ್ಯಾದಿಗಳ ಪಕ್ಷಿಗಳ ಹೆಸರಿವೆ. ಪ್ರಾಣಿಯನ್ನು ಅತೀ ಪ್ರೀತಿಯಿಂದ ಸಾಕುವುದೂ ಇದೆ. ಕಂಬಳದ ಕೋಣಗಳಿಗೆ ಲವ–ಕುಶ, ಜಯ–ವಿಜಯ, ಕಾಳ–ಬೋಳ ಎಂಬ ಹೆಸರುಗಳಿಂದ ಸೂಚಿಸುತ್ತಾರೆ. ಹಾಗೆಯೇ ಕರಿಯ ಎಂಬ ನಾಯಿಯ ಚಿತ್ರಣವೂ ಇದೆ.

ಕರಾವಳಿ ತೀರದ ಜನರ ವೇಷ–ಭೂಷಣಗಳು ವೃತ್ತಿ ಜಾತಿ, ಅಂತಸ್ತುಗಳಿಗೆ ತಕ್ಕಂತೆಯೇ ಭಿನ್ನವಾಗಿರುತ್ತಿದ್ದವು. ಬ್ರಾಹ್ಮಣರು ಮಡಿವಂತಿಕೆ, ಶುಚಿತ್ವ ಅವರ ಬಟ್ಟೆಬರೆಗಳ ಮೂಲಕ ವ್ಯಕ್ತವಾಗುತ್ತಿತ್ತು. ಗುತ್ತಿನ ಒಡೆಯರು ರೇಷ್ಮೆಯ ಬಟ್ಟೆಯನ್ನು ಧರಿಸುತ್ತಿದ್ದರು. ಕೂಲಿಯಾಳುಗಳ ಉಡುಪು ಸರಳವಾಗಿತ್ತು. ಶೆಡ್ತಿಯರು ದೂರದ ಮುಂಬಯಿಯಿಂದ ನುಣುಪಾದ ಸೀರೆಗಳನ್ನು ತರಿಸುತ್ತಿದ್ದರು. ಈ ಕಾದಂಬರಿಯಲ್ಲಿ ಗಂಡಸರು ಕಿವಿಗೆ ಧರಿಸುತ್ತಿದ್ದ ರೀತಿ ಜಾತಿಗೆ ತಕ್ಕಂತೆ ಒಂಟಿಗಳನ್ನು ಧರಿಸುತ್ತಿದ್ದ ಚಿತ್ರಣವಿದೆ "ಶ್ಯಾನು

ಭೋಗರ, ಹೆಬ್ಬಾರರ, ಐತಾಳರ, ಕಿಟ್ಟು ಭಟ್ಟರ ಕಿವಿಯಲ್ಲಿ ಬಿಳಿ ಹರಳಿನ ಒಂಟಿ, ಪಾಂಡು ಶೆಟ್ಟರ ಕಿವಿಯಲ್ಲಿ ಕೆಂಪು ಹರಳಿನ ಒಂಟಿಯ ಮೇಲೆ ಕುಸುರಿ ಕೆಲಸ, ಅಂತಸ್ತಿಗೆ ತಕ್ಕಂತೆ ಗಾತ್ರದಲ್ಲಿ ಚಿಕ್ಕದು. ಕೆಳಜಾತಿಯ ಪೂಜಾರಿ, ಮಡಿವಾಳ, ಮ್ಯೊಲಿಗಳಿಗೆಲ್ಲಾ ಹಸಿರು ಒಂಟಿಗಳು”.[೧೮] ಈ ರೀತಿಯ ವಿವರಗಳಿವೆ. ಶೆಡ್ತಿಯರು ವಿವಿಧ ಕುಸುರಿಯುಳ್ಳ ಆಭರಣಗಳನ್ನು ತೊಡುತ್ತಿದ್ದರು. ಈ ಎಲ್ಲ ದೈನಂದಿನ ವಿವರಗಳಿಂದ ಕರಾವಳಿ ಬದುಕಿನ ಸಾಮಾಜಿಕ ಮುಖ ಸ್ಫುಟಗೊಂಡಿದೆ. ಜನರ ವೃತ್ತಿಗಳು ಆಹಾರಗಳು, ಬಟ್ಟೆಗಳು ಹೇಗೆ ಅಂತರ್ ಸಂಬಂಧ ಪಡೆದಿದೆ ಎಂಬುದು ಇಲ್ಲಿ ವ್ಯಕ್ತವಾಗಿದೆ.

ಪ್ರಾಚೀನ ಕಾಲದಿಂದಲೂ ಅರ್ಥವ್ಯವಸ್ಥೆ ನಿಸರ್ಗದ ಪರಿಕರಗಳನ್ನು, ಪರಿಸ್ಥಿತಿಯನ್ನು ಹಾಗೂ ಮಾನವ ಪ್ರಯತ್ನಗಳನ್ನು ಅವಲಂಬಿಸಿ ರೂಪುಗೊಂಡಿವೆ. ಹಿಂದಿನ ಕಾಲದಲ್ಲಿ ಸಂಪರ್ಕ ಸಾಧನಗಳ ಕೊರತೆ, ಲಭ್ಯ, ಸಂಪನ್ಮೂಲಗಳ ದುರ್ಬಳಕೆ, ನಿಸರ್ಗಾವಲಂಬನೆ ಮತ್ತು ಮಾನವ ಶಕ್ತಿಯನ್ನು ಪೋಲು ಮಾಡುವುದರಿಂದ ಆರ್ಥಿಕ ವಿಕಾಸ ಇಂದಿನಂತೆ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಈ ಕಾದಂಬರಿಯಲ್ಲಿ ಕಾಣಿಸಿ ಕೊಳ್ಳುವ ತುಳುನಾಡಿನ ಜನರ ಅರ್ಥ ವ್ಯವಸ್ಥೆಯ ಚಿತ್ರಣವನ್ನು ಕಾಣಬಹುದು. ಇಲ್ಲಿನ ಸಾಮಾಜಿಕ ರಚನೆಯು ‘ಶ್ರಮವಿಭಜನೆಯ ತತ್ವಕ್ಕೆ’ ಅನುರೂಪವಾಗಿತ್ತು. ಅಲ್ಲಿ ಬರುವ ಹಲವಾರು ಜಾತಿಗಳನ್ನು ಜಾತಿಯ ಜನರ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, ಸಮಷ್ಟಿ ಬದುಕಿನ ಶ್ರಮವನ್ನು ಕಾಣುತ್ತೇವೆ. ಕೃಷಿ ಕೂಲಿಗಳು ಆರು ಕಟ್ಟುವುದು, ಉಳುಮೆ ಮಾಡುವುದು, ಹುಣಿ ಸವರುವುದು, ದನಗಳಿಗೆ ಉರುಳಿ ಬೇಯಿಸುವುದು, ಕಲಗಚ್ಚು ಕಲಸಿಡುವುದು, ಸ್ನಾನ ಮಾಡಿಸುವುದು ಇವು ಪುರುಷರ ದಿನ ನಿತ್ಯದ ಕೆಲಸಗಳು. ಹೆಂಗಸರು ಯಜಮಾನನ ಅಂಗಳ ಗುಡಿಸುವುದು, ಭತ್ತ ಕುಟ್ಟುವುದು, ಸಸಿ ಕೀಳುವುದು, ಸಸಿ ನೆಡುವುದು, ಕಳೆ ತೆಗೆಯುವುದು ಇನ್ನೂ ಮುಂತಾದ ಕೆಲಸವನ್ನು ಮಾಡುತ್ತಿದ್ದರು. ಇದಕ್ಕೆ ‘ಪಡಿ’ ಎಂದರೆ ಶ್ರಮಕ್ಕೆ ನೀಡುವ ಪ್ರತಿಫಲ; ಆಳುಗಳ ಕೆಲಸಕ್ಕಾಗಿ ಪಡೆಯುತ್ತಿದ್ದ ಸಂಭಾವನೆಯನ್ನು ಕೆಲಸ ಮುಗಿದ ನಂತರ ಕೊಡುತ್ತಿದ್ದರು. ಹಬ್ಬ ಹರಿದಿನಗಳಲ್ಲಿ ಆಳುಗಳನ್ನು ಖುಷಿ ಪಡಿಸಲು ಯಜಮಾನರು ಧಾರಾಳವಾಗಿ ಪಡಿಯನ್ನು ಕೊಡುತ್ತಿದ್ದರು. ಮತ್ತೆ ಯಥಾ ಪ್ರಕಾರ ಅವರ ಬದುಕು ಸಾಗುತ್ತಿತ್ತು. ನಂತರ ಅದೇ ಪರಿಸ್ಥಿತಿ ಒಕ್ಕಲಾಳುಗಳದು.

ಯಜಮಾನ ಒಕ್ಕಲಾಳುಗಳಿಂದ ‘ಗೇಣಿ’ ಪಡೆಯುವ ಪದ್ಧತಿಯೂ ಇತ್ತು. ಸಾಲ ತೀರಿಸುವುದು ಮೊದಲು ಮೂಲ ಗೇಣಿಯವರು ಗೇಣಿ ಕೊಡಬೇಕಾದ ಆಸ್ತಿಯ ಹಕ್ಕಿನ ಅರ್ಧವನ್ನು ಹಣವನ್ನು ಕೊಟ್ಟು ಖರೀದಿಸಿದ್ದು, ಒಕ್ಕಲಾಳುಗಳು ವರ್ಷಕ್ಕೆ ಇಂತಿಷ್ಟು ಅಕ್ಕಿ ಮುಡಿಗಳನ್ನು ಗೇಣಿಯಾಗಿ ಸಲ್ಲಿಸಬೇಕು. ಈ ರೀತಿ ಸಾಲ ವಸೂಲಿ ಮಾಡುತ್ತಿದ್ದರು. ಜೀತದಾಳುಗಳು ಸಾಲ ಮಾಡಿಯಾದರೂ ಅಥವಾ ತನ್ನನ್ನು ಒತ್ತೆ

ಇಟ್ಟಾದರೂ ಗೇಣಿ ಒಪ್ಪಿಸಬೇಕು ಎನ್ನುವುದು ಒಡೆಯನ ಸಿದ್ಧಾಂತ, ಬ್ರಾಹ್ಮಣರು, ಗುತ್ತಿನೊಡೆಯರು ಆರ್ಥಿಕವಾಗಿ ಐಷಾರಾಮಿಯ ಜೀವನ ನಡೆಸುತ್ತಿದ್ದರು. ಜೀತದಾಳುಗಳ ಜೀವನ ಸರಳವಾಗಿತ್ತು. ಅವತ್ತಿನ ಸಂಭಾವನೆಯನ್ನು ಅವತ್ತೇ ಉಪಯೋಗಿಸುತ್ತಿದ್ದ ಇವರು ಶ್ರಮ ಪಡುವವರಾಗಿದ್ದರು. ಈ ಎಲ್ಲಾ ವಿವೇಚನೆಯಿಂದ ತುಳುನಾಡಿನ ಜೀತದಾಳುಗಳ ಸ್ಥಿತಿ ಹಾಗೂ ಅಂದಿನ ಕಾಲದ ಆರ್ಥಿಕ ಸ್ಥಿತಿ ಗತಿಗಳು, ಜನರ ಬೇಕು ಬೇಡಗಳು ಒಡೆಯನ ಇಷ್ಟಾನಿಷ್ಟಗಳ ಮೇಲೆ ನಿರ್ಧರಿತವಾಗಿದ್ದವು. ಜಮೀನ್ದಾರರು, ಜೀತದಾಳುಗಳು, ಮೇಲುವರ್ಗ, ಕೆಳವರ್ಗ, ಬ್ರಾಹ್ಮಣ – ಹೊಲೆಯರು ಹೀಗೆ ಇವರ ಆರ್ಥಿಕ ವ್ಯವಸ್ಥೆಯನ್ನು ರೂಪುಗೊಳಿಸುತ್ತಿದ್ದರು, ಮುಂದುವರಿಕೆಯ ರೂಪಗಳಾಗಿ ಕಂಡು ಬರುತ್ತಿದ್ದವು.

ಆ ಕಾಲದ ವೈದ್ಯಕೀಯ ಉಪಚಾರಗಳು ಕೂಡ ಅತಿಮಾನುಷ ಪ್ರಭಾವದಿಂದ ಮುಕ್ತವಾಗಿರಲಿಲ್ಲ. ಆಧುನಿಕವಾದ ವೈದ್ಯಕೀಯದಂತಹ ಸಾಧನ ಸೌಲಭ್ಯಗಳು ಬರುವ ಮೊದಲಿನ ಸ್ಥಿತಿಗೆ ತುಳುನಾಡಿನ ಅಂತಹ ಪ್ರಯತ್ನಗಳು ಆಧಾರಗಳಾಗುತ್ತವೆ. ಅಲ್ಲಿಯ ಜನರು ತಮ್ಮ ಕಾಯಿಲೆ, ಅಸ್ವಸ್ಥಗಳಿಗೆ ಉಪಚಾರಗಳನ್ನು ಆಶ್ರಯಿಸುತ್ತಿದ್ದರು. ವೈದ್ಯ ಉಗಮಕ್ಕೆ ಮೂಲ ಕಾರಣ ಹೀಗಿದೆ. 'ಭೂಮಿಯ ಮೇಲೆ ಹುಟ್ಟಿದಾತನು ತಾನು ಸುಖಿಯಾಗಿರಬೇಕು. ಚಿರಕಾಲ ಉಳಿಯಬೇಕು, ನಿರೋಗಿಯಾಗಿರಬೇಕು' ಎಂಬ ಮಹದಾಕಾಂಕ್ಷೆಯೇ ವೈದ್ಯದ ಹುಟ್ಟಿಗೆ ಕಾರಣ. ಆಟಿ ಅಮವಾಸ್ಯೆಯಂದು ಬೆಳಗಿನ ಜಾವ ಎಲ್ಲ ಮನೆಗಳು ಸೂರ್ಯ ಹುಟ್ಟುವ ಮೊದಲೆ ಬೆಟ್ಟ–ಗುಡ್ಡ–ಕಟ್ಟಿ ಹುಣಿ ಏರಿ ಪಾಲೆಮರದ ತೊಗಟೆ ಕೆತ್ತಿ ತರಬೇಕು. ಅಮಾವಾಸ್ಯೆಯ ಕತ್ತಲು ಬೇರೆ. ಎಲ್ಲರೂ ಒಟ್ಟಾಗಿ ಹೋಗಲು ಕಾಯುವರು. ಎಲ್ಲರೂ ಅರೆ ಬೆತ್ತಲಾಗಿ ಹೋಗುವುದು ಒಂದು ನಿಯಮ. ಪಾಲೆ ಮರದ ತೊಗಟೆಯನ್ನು ಕಲ್ಲಿನಿಂದ ಜಜ್ಜಿ ತೆಗೆಯುವಾಗ ಎಲಸ್ತ್ರವನ್ನು ಎಸೆಯುತ್ತಾರೆ. ಮಳೆಯ ಕಾಲವಾದ್ದರಿಂದ ಕೆಮ್ಮು, ನೆಗಡಿ, ಶೀತಜ್ವರಗಳಿಗೆ ಹಬ್ಬ, ಇಂತಾ ಸಂಕಷ್ಟ ಪರಿಸ್ಥಿತಿಯಲ್ಲಿ ತನ್ನ ಮಕ್ಕಳನ್ನು ರೋಗರುಜಿನಗಳಿಂದ ಪಾರು ಮಾಡಲು ಭೂತಾಯಿ, ಪಾಲೆ ಮರದ ಕೆತ್ತೆಯಲ್ಲಿ ಔಷಧ ತುಂಬಿಸಿಡುತ್ತಾಳೆ. ಕಲ್ಲಿನಿಂದ ಜಜ್ಜಿ ಕೆತ್ತೆ ತೆಗೆದು ತಂದವರೇ ಮಲಗಿ ಬಿಡುತ್ತಾರೆ.

ಮನೆಯ ಹೆಂಗಸರು ಕೆತ್ತೆ ಜಜ್ಜಿ ರಸ ತೆಗೆದು, ಅದಕ್ಕೆ ಕರಿಮೆಣಸು, ಓಮ, ಶುಂಠಿ ಅರೆದು ಹಾಕಿ, ಕಬ್ಬಿಣದ ತುಂಡನ್ನು ಕಾಯಿಸಿ ರಸದೊಳಗೆ ಹಾಕಿ ಬಿಟ್ಟರೆ ಸರ್ವರೋಗ ನಿರೋಧಕ ರಾಮಬಾಣ 'ಆಟಿ ಅಮಾವಾಸ್ಯೆಯ ಮದ್ದು' ಸಿದ್ಧ. ಕರಾವಳಿ ತೀರ ಪ್ರದೇಶ ಅರಣ್ಯದ ಭಾಗವನ್ನು ಹೊಂದಿದೆ. ಅನೇಕ ಗಿಡಮೂಲಿಕೆಗಳ ಉಗಮ ಸ್ಥಾನವಾಗಿದೆ. ತುಳುನಾಡಿನ ಬಿಲ್ಲವ ಜನಾಂಗದ ಒಂದು ವರ್ಗ ವೈದ್ಯ, ಬೈದ್ಯರೆಂದು ಪ್ರಸಿದ್ಧ, ತುಳುನಾಡಿನಲ್ಲಿ ಔಷಧಿ ಹಾಗೂ ಮಂತ್ರ ಚಿಕಿತ್ಸೆ ನೀಡುವ ಬೈದ್ಯ – ಪೂಜಾರಿಗಳು

ನಾಡ ಬೈದ್ಯದ ಅವಿಭಾಜ್ಯ ಅಂಗವಾಗಿದೆ. ಈ ಎಲ್ಲಾ ವಿವರಗಳು ಕಾದಂಬರಿಯಲ್ಲಿ ಬಹಳ [ಸೊಗಸಾಗಿ] ಅಚ್ಚುಕಟ್ಟಾಗಿ ಮೂಡಿಬಂದಿದೆ.

ನಾಗವೇಣಿಯವರ ಕಾದಂಬರಿ ತುಳುನಾಡಿನ ಒಂದು ಪ್ರದೇಶದ ಜನರ ಬದುಕಿನ ಸಮಗ್ರತೆಯನ್ನು ತುಂಬ ಕಲಾತ್ಮಕವಾಗಿ ದಾಖಲಿಸುತ್ತವೆ. ತುಳುನಾಡಿನ ಕಡಲು, ಬೆಟ್ಟ, ನದಿ, ಪ್ರಾಣಿ, ಪಕ್ಷಿ, ಮೀನು, ಜನರ ಮನೆ, ಗದ್ದೆ, ಬೇಟೆ, ಸಾಕುಪ್ರಾಣಿ, ಕ್ರೀಡೆಗಳು, ವೇಷ-ಭೂಷಣಗಳು, ನಂಬಿಕೆ, ಸಂಪ್ರದಾಯಗಳು, ಮೌಢ್ಯ, ಶೋಷಣೆ, ಕಂಬಳ, ಕುಣಿತಗಳು, ಆಹಾರ, ಬೆಳೆಗಳು, ಮಳೆ, ತಿಂಗಳು ಇತ್ಯಾದಿಗಳು ಆಯಾ ಪರಿಸರದಲ್ಲಿ ಅರಳಿಕೊಂಡಂತೆ ಕಾದಂಬರಿಯಲ್ಲಿ ಚಿತ್ರಿತವಾಗಿವೆ. ವಿವರಗಳು, ವಸ್ತುಗಳು, ಆಕರಗಳು, ಪರಿಕರಗಳು ಒಂದು ಜನಜೀವನದ ಕಲ್ಪನೆ ಒದಗಿಸಲು ಸಹಾಯ ನೀಡುತ್ತವೆ. ಆ ಮೂಲಕವೇ 'ಸಂಸ್ಕೃತಿ' ಗಮನಕ್ಕೆ ಬರುತ್ತದೆ. ಸ್ವಾತಂತ್ರ್ಯ ಚಳುವಳಿಯ ಕಾಲದ ತುಳುನಾಡು ಅರಸಿಕೊಂಡ ಜೀವನ ವಿಧಾನ ಈ ಕಾದಂಬರಿಯಲ್ಲಿ ವ್ಯಕ್ತವಾಗಿದೆ. ಒಟ್ಟು ಬದುಕಿನ ವಿವರಗಳನ್ನು ಆಗು ಹೋಗುಗಳನ್ನು ವಿವರಿಸುತ್ತಾ ಹೋಗುತ್ತಾರೆ. ನಾಗವೇಣಿ ಶೋಷಿತರ ಕಣ್ಣಿನಿಂದಲೇ ಬದುಕನ್ನು ಕಾಣುತ್ತಾರೆ. ಇವರ ಮಹತ್ವದ ಕಾದಂಬರಿ 'ಗಾಂಧಿ ಬಂದ'. ಇಲ್ಲಿ ಕುವೆಂಪು ಅವರ ಶ್ರಮಜೀವಿಗಳ ಪ್ರಪಂಚ ಮತ್ತು ಕಾರಂತರ ದಕ್ಷಿಣ ಕನ್ನಡ ಎರಡೂ ಸಂಗಮಿಸಿವೆ. ಮಿಷನರಿಗಳ ಪ್ರಭಾವದಿಂದ ದಕ್ಷಿಣ ಕನ್ನಡ ಜಿಲ್ಲೆ ಆಧುನಿಕ ವಿದ್ಯೆಯನ್ನು ಕರ್ನಾಟಕದ ಇತರ ಜಿಲ್ಲೆಗಳಿಗಿಂತ ಮೊದಲೇ ಪಡೆದಿದ್ದರೂ ಅಸ್ಪೃಶ್ಯತೆಯಂತಹ ಸಮಸ್ಯೆಗಳು ಸ್ವಾತಂತ್ರ್ಯಪೂರ್ವದಲ್ಲಿ ಜೀವಂತವಾಗಿದ್ದವು. ಜಾತಿ-ತಾರತಮ್ಯಗಳು, ಜಮೀನ್ದಾರರ ಶೋಷಣೆ, ವಿಧವೆಯರ ಸಮಸ್ಯೆ ಹೀಗೆ ಹತ್ತು ಹಲವು ಸಮಸ್ಯೆಗಳು, ಈ ಹಿನ್ನಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಗಾಂಧಿ ಬಂದ ವಿಷಯವನ್ನು ಕೇಂದ್ರವಾಗಿರಿಸಿಕೊಂಡು, ತುಳು ಮಾತನಾಡುವ ದಕ್ಷಿಣ ಕನ್ನಡ ಭಾಗದ ಸಾಮಾಜಿಕ ಸಾಂಸ್ಕೃತಿಕ ಲೋಕವನ್ನು ನಾಗವೇಣಿಯವರ 'ಗಾಂಧಿ ಬಂದ' ಕಾದಂಬರಿ ಚಿತ್ರಿಸಿದೆ. ಗಾಂಧಿಗೂ ಕಾದಂಬರಿಗೂ ಯಾವುದೇ ಹೊಂದಾಣಿಕೆ ಇಲ್ಲ. ಗಾಂಧಿ ಒಬ್ಬ ವ್ಯಕ್ತಿಯಾಗಿ ಬರದೆ ಶೋಷಿತ ಜನರ ಬಿಡುಗಡೆಯ ಆಶಯವಾಗಿಯೂ ಮಂಗಳೂರಿಗೆ ಬರುತ್ತಾರೆ. ಲೇಖಕಿ ತುಳುನಾಡಿನ ಸಾಂಸ್ಕೃತಿಕ ಚಿತ್ರವೊಂದನ್ನು ಪರಿಚಯಿಸುವುದೇ ಲೇಖಕಿಯ ಮುಖ್ಯ ಉದ್ದೇಶವಾಗಿದೆ.

ಕಾದಂಬರಿಯಲ್ಲಿ ಗಾಂಧಿ ಮಂಗಳೂರಿಗೆ ಮೂರು ಸಲ ಬರುತ್ತಾರೆ. ಅಸ್ಪೃಶ್ಯತೆಯ ವಿರುದ್ಧದ ಗಾಂಧಿ ಚಳುವಳಿ ಬಗ್ಗೆ ಬ್ರಾಹ್ಮಣ ಸಮುದಾಯಕ್ಕೆ ಅಸಮಾಧಾನ. ಆದರೆ ಶೋಷಿತ ವರ್ಗದ ಜನರಿಗೆ, ಸ್ತ್ರೀಯರಿಗೆ ಗಾಂಧಿ ತಮ್ಮೆಲ್ಲ ಕಷ್ಟಗಳಿಗೆ ಪರಿಹಾರರೂಪವಾಗಿ ಕಾಣುತ್ತಾರೆ. ಮಾರಪ್ಪ ಗಾಂಧಿ ತತ್ವಕ್ಕೆ

ಮಾರು ಹೋದವ. ತಾಯಿ ಸೂರಕ್ಕೆ ಗಾಂಧಿಯನ್ನು ಬೈದಾಗ ಪರಂಗಿಯವರ ವಿಷಯ ಹೇಳಿ, ಗಾಂಧಿಯವರ ಸರಳತೆ, ಒಳ್ಳೆಯತನವನ್ನು ಮನದಟ್ಟು ಮಾಡಲು ಪ್ರಯತ್ನಿಸುತ್ತಿದ್ದ.

ಗಾಂಧಿ ನಿಧಿಗೆ ಜನರು ತಮ್ಮಿಂದಾದ ಸಹಾಯವನ್ನು ಮಾಡುತ್ತಾರೆ. ಮಾರಪ್ಪ ಮತ್ತು ತಿಂಗಳಾಯರು ನಿಧಿ ಸಂಗ್ರಹಕ್ಕಾಗಿ ಜೀವ ತೇಯುತ್ತಾರೆ. ಮಾರಪ್ಪ ಕಳ್ಳು ಸರ, ಗಂಗಸರ ಕುಡಿಯ ಬೇಡಿರೆಂದು ಮನವೊಲಿಸುತ್ತಾನೆ. ಒಕ್ಕಲಾಳುಗಳಿಗೆ ಕೆಲಸ ಮಾಡುವಾಗ, ನಿಂತಾಗ, ಕುಳಿತಾಗ, ಗಾಂಧಿಯವರ ಮಾತೇ 'ಅಂತಪ್ಪ ಅಕ್ಕಿ ಮುಡಿ ಕಟ್ಟುವಾಗ, ಅಂಗರ ಮೂಲ್ಯ ಗದ್ದೆ ಹುಣಿ ಸವರುವಾಗ, ಎಳೆ ಜೋವು ದ್ರೌಪದಿಯಮ್ಮ, ಅಪ್ಪಿ ತಪ್ಪಿ ಏನಾದರೂ ಸಿಕ್ಕಿದರೆ ಅವರೆಲ್ಲ ಮೊದಲು ಕೇಳುವ ಪ್ರಶ್ನೆ ಗಾಂಧಿಯವರ ಬಗ್ಗೆಯೇ. ತಕಲಿ–ಚರಕ, ಖಾದಿ–ಗಾಂಧಿ ಎಂದರೆ ಆ ದುಡಿದು ತಿನ್ನುವ ಆಳುಗಳಿಗೂ ಅದೇನೋ ಬ್ರಾಂ – ಬ್ರೂಂ. . . ಶ್ಲೋಕ–ಮಂತ್ರದಷ್ಟೇ ಪವಿತ್ರ ಅಪೂರ್ವ ಎಂದನಿಸಿರಬೇಕು"[೧೯] ಗಾಂಧಿ ಬಂದಾಗ ಮಂಗಳೂರು ಪೇಟೆಯ ಅಸಾಧ್ಯ ಜನ ಸಂದಣಿಯಲ್ಲಿ ಕಷ್ಟಪಟ್ಟು ಗಾಂಧಿಯವರ ದರ್ಶನವನ್ನು ಪಡೆದು ನಮಸ್ಕರಿಸಿದ ಈ ಹಳ್ಳಿಯ ಜನರಿಗೆ ಸಂಜೆ ನಡೆಯುವ ಅವರ ಭಾಷಣವನ್ನು ಕೇಳಲು ಆಸೆಯಿದ್ದರೂ ಮಧ್ಯ ರಾತ್ರಿಯಲ್ಲಿ ನದಿ ದಾಟಿ ಊರಿಗೆ ಹೋಗುವುದು ಕಷ್ಟ ಎಂದು ನಿರಾಶೆಯಿಂದ ಊರಿಗೆ ಮರಳುತ್ತಾರೆ.

ಎಳೆ ವಯಸ್ಸಿನ ವಿಧವೆ 'ದ್ರೌಪದಿಗೆ ಅದ್ರಾಮನನ್ನು ನೋಡದಂತೆ ಗೃಹಬಂಧನದಲ್ಲಿರಿಸುತ್ತಾರೆ. ತಂದೆ ಹೆಬ್ಬಾರರು, "ತಾಯಿ ರುಕುಮಣಿಯಮ್ಮನ ಕಣ್ಕಾಪಿನಲ್ಲಿ ಭದ್ರವಾಗಿದ್ದಾಳೆ ಇನ್ನು ಸನಾತನ ಧರ್ಮದ ಕೋಟೆ ಕುಸುಯುವಂತಿಲ್ಲ. ಎಂದು ನೆಮ್ಮದಿ ನಿಶ್ಚಿಂತೆ, ನಿರ್ಭಯದಿಂದ ಓಡಾಡಿಕೊಂಡಿದ್ದಾರೆ".[೨೦] ದ್ರೌಪದಿಯ ಸ್ಥಿತಿಯೊಂದು ಬಗೆಯಾದರೆ ದೈಹಿಕ ವಿಕಲತೆಯನ್ನು ಹೊಂದಿದ ಜಾರಿಗೆ ಬೆಟ್ಟಿನ ಸುಬ್ಬಯ್ಯ ಶೆಟ್ಟರ ಮಗಳು ದಾರುವಿನ ಕಷ್ಟ ಇನ್ನೊಂದು ಬಗೆಯದು. ಗರ್ಭಕೋಶವಿಲ್ಲದ ದಾರುವನ್ನು ಊರಿನ ಜನರೆಲ್ಲ ಶಿಖಂಡಿಯೆಂದು ತಿರಸ್ಕಾರದಿಂದ ಕಾಣುತ್ತಾರೆ. "ಕಿತ್ತು ತಿನ್ನುವ ಏಕಾಕಿತನವನ್ನು, ಮನಸ್ಸಿನ ಮಧುರ ಭಾವನೆಗಳನ್ನು, ನೈಸರ್ಗಿಕವಾದ ದೈಹಿಕ ಒತ್ತಡದಗಳನ್ನು ಅದುಮಿಡಲಾಗದೆ, ಹೆತ್ತವರೊಡನೆ, ಒಡಹುಟ್ಟಿದವರೊಡನೆ ಮನಸ್ಸನ್ನೂ ಬಿಚ್ಚಿಡಲಾಗದೆ ಜೀವಂತ ಶವವಾದಳು"[೨೧] ಇವರೆಲ್ಲ ಹತಾಶರಾದಾಗ ಗಾಂಧಿ ತಕಲಿಯನ್ನು ಹಿಡಿದು ನೂಲುವುದನ್ನು ಕಾಣುತ್ತೇವೆ. ಮಾರಪ್ಪ ವಿಧವೆಯ ಮರು ವಿವಾಹವಾಗಬೇಕು ಎಂದು ಗಾಂಧಿ ಭಾಷಣದಲ್ಲಿ ಹೇಳಿದಾಗ ಆ ಪ್ರಭಾವಕ್ಕೆ ಸಿಲುಕಿ ದಾರುಗೆ ಬದುಕನ್ನು ಕೊಡುತ್ತಾನೆ.

ಒಮ್ಮೆ ಗಾಂಧಿ ಬಂದು ಹೋದ ಮೇಲೆ ಕಾರ್ನಾಡು ಸದಾಶಿವರಾಯರ ನೇತೃತ್ವದಲ್ಲಿ ಅಸ್ಪೃಷ್ಯತೆಯ ವಿರುದ್ಧ ಜಾತಿತಾರಮ್ಯದ ವಿರುದ್ಧ ಒಂದು ಚಳುವಳಿ ಪ್ರಾರಂಭವಾಗುತ್ತದೆ. ದೇವಸ್ಥಾನವೊಂದರಲ್ಲಿ ಸಹಪಂಕ್ತಿಯಲ್ಲಿ ಕುಳಿತುಕೊಳ್ಳುವುದಿಲ್ಲ. ಉಳಿದ ಶೂದ್ರ ಜಾತಿಯವರೂ 'ನಾವು ಮೇಲು ನಾವು ಮೆಲು' ಎಂದು ಕಿತ್ತಾಡುತ್ತಾರೆ. ಕೊರಗರ ಐತುವಿಗೆ ಮಾತ್ರ ಎಲ್ಲರ ಜೊತೆಗೆ ಕುಳಿತು ಅಂತಹ ವಿಶೇಷ ಊಟವನ್ನು ಮಾಡಿದ್ದು ತುಂಬಾ ಸಂತೋಷವಾಗುತ್ತದೆ. ಇದಕ್ಕೆಲ್ಲ ಕಾರಣ ಗಾಂಧಿ ಎಂದು ತಿಳಿದಾಗ ಅವನಿಗೆ ಗಾಂಧಿಯನ್ನು ನೋಡುವ ಹುಚ್ಚು ಅಂಟಿಕೊಂಡಿತು. ಗಾಂಧಿ ಯಾವಾಗ ಬರುತ್ತಾರೆಂದು ನಿರೀಕ್ಷಿಸತೊಡಗಿದ್ದ.

ಹೆಬ್ಬಾರರ ಮಗಳು ವಿಧವೆ, ದ್ರೌಪದಿ ಅದ್ರಾಮನ ಪ್ರೀತಿಯಲ್ಲಿ ಸಿಲುಕಿ ಅವನ ಜೊತೆ ಓಡಿಹೋಗುತ್ತಾಳೆ. ಬ್ರಾಹ್ಮಣರು ಅವಳ ಶ್ರಾದ್ಧವನ್ನು ಮಾಡುತ್ತಾರೆ. ಗುತ್ತಿನ ಶೆಟ್ಟರು, ಒಕ್ಕಲಾಳುಗಳು, ಈ ಮದುವೆಗೆ ಬೆಂಬಲ ನೀಡುತ್ತಾರೆ. ಅದ್ರಾಮನ ಅಕಾಲಿಕ ಮರಣದಿಂದ ಒಂದು ಮಗುವಿನ ತಾಯಿ ದ್ರೌಪದಿ ಮತ್ತೆ ವಿಧವೆಯಾಗುತ್ತಾಳೆ. ಮೂರನೆ ಸಲ ಗಾಂಧಿ ಬಂದಾಗ ದ್ರೌಪದಿಯಲ್ಲಿ ಕೆಲವು ಬದಲಾವಣೆಗಳಾಗುತ್ತವೆ. ಕುಂಕುಮ, ಹೂವು, ಒಡವೆಗಳು ಧರಿಸಲು ಅವರು ಕಾರಣರಾಗುತ್ತಾರೆ.

ಮಾರಪ್ಪನ ತಾಯಿ ಸೊರಕ್ಕೆಗೆ ಇದನ್ನು ಕೇಳಿ ಸಂತಸ ವ್ಯಕ್ತಪಡಿಸುತ್ತಾರೆ. "ಅಯ್ಯೋ... ಪುಣ್ಯಾತ್ಮ! ನಿನ್ನನ್ನೊಂದು ಗಳಿಗೆ ನಾನು ಕಾಣದೆ ಹೋದೆನೇ' ಎಂದು ಪರಿತಪಿಸುತ್ತ ಚಾವಡಿಯಲ್ಲಿ ಕುಸಿದು ಕುಳಿತರು!"[೨೨] ಹೇಗೆ ಗಾಂಧಿ ಅಲ್ಲಿಯ ಜನರ ಕಷ್ಟಗಳಿಗೆ ಒಂದು ದೇವರ ರೂಪದಲ್ಲಿ ಬಂದು ಜನರಲ್ಲಿ ಒಂದು ಹೊಸ ಭಾವನೆಗಳನ್ನು ಹುಟ್ಟಿಸಲು ಕಾರಣರಾಗುತ್ತಾರೆ, ಚಳುವಳಿಯ ಕಾವು ಹಳ್ಳಿ ಹಳ್ಳಿಗೂ ಹೇಗೆ ಹರಡಿರುತ್ತದೆ. ಅದಕ್ಕೆ ಜನರು ಯಾವ ರೀತಿಯಲ್ಲಿ ಸ್ಪಂದಿಸುತ್ತಾರೆ, ಎನ್ನುವ ವಿವರಗಳೆಲ್ಲ ಈ ಕಾದಂಬರಿಗೆ ಪೂರಕವಾಗಿ ಬಂದಿವೆ.

ಅಡಿ ಟಿಪ್ಪಣಿಗಳು:

೧. ಚ.ನ. ಶಂಕರ ರಾವ್, ಸಮಾಜ ಶಾಸ್ತ್ರ, ಪುಟ ೩

೨. ಡಿ.ಕೆ. ಶಿವಣ್ಣ, ಸಮಾಜಶಾಸ್ತ್ರ, ಪುಟ ೩

೩. ಪುಟ ೮, ಗಾಂಧಿ ಬಂದ, ಎಚ್. ನಾಗವೇಣಿ

೪. ಪುಟ ೧೭–೧೮, ಗಾಂಧಿ ಬಂದ, ಎಚ್. ನಾಗವೇಣಿ

೫. ಪುಟ ೧೨, ಗಾಂಧಿ ಬಂದ, ಎಚ್. ನಾಗವೇಣಿ

೬. ಪುಟ ೩೩, ಗಾಂಧಿ ಬಂದ, ಎಚ್. ನಾಗವೇಣಿ

೭. ಪುಟ ೪೧, ಗಾಂಧಿ ಬಂದ, ಎಚ್. ನಾಗವೇಣಿ

೮ ಪುಟ ೧೮೭, ೧೮೮, ಗಾಂಧಿ ಬಂದ, ಎಚ್. ನಾಗವೇಣಿ

೯. ಪುಟ ೧೮೫, ಗಾಂಧಿ ಬಂದ, ಎಚ್. ನಾಗವೇಣಿ

೯. ಪುಟ ೧೮೫, ಗಾಂಧಿ ಬಂದ, ಎಚ್. ನಾಗವೇಣಿ

೧೦. ಪುಟ ೮–೯, ಗಾಂಧಿ ಬಂದ, ಎಚ್. ನಾಗವೇಣಿ

೧೧. ಪುಟ ೨೯, ಗಾಂಧಿ ಬಂದ, ಎಚ್. ನಾಗವೇಣಿ

೧೨. ಪುಟ ೨೩, ಗಾಂಧಿ ಬಂದ, ಎಚ್. ನಾಗವೇಣಿ

೧೩. ಕರಾವಳಿ ಜಾನಪದ, ಪುಟ ೩೩, ಪ್ರೊ. ಎ.ವಿ. ನಾವಡ

೧೪. ಪುಟ ೧೪, ಗಾಂಧಿ ಬಂದ, ಎಚ್. ನಾಗವೇಣಿ

೧೫. ಪುಟ ೧೧, ೧೨, ಗಾಂಧಿ ಬಂದ, ಎಚ್. ನಾಗವೇಣಿ

೧೬. ಕರಾವಳಿ ಜಾನಪದ, ಎ.ವಿ. ನಾವಡ, ಪುಟ ೩೧೭

೧೭. ಪುಟ ೯೫, ಗಾಂಧಿ ಬಂದ, ಎಚ್. ನಾಗವೇಣಿ

೧೮. ಪುಟ ೧೦೨, ಗಾಂಧಿ ಬಂದ, ಎಚ್. ನಾಗವೇಣಿ

೧೯. ಪುಟ ೧೬೩, ಗಾಂಧಿ ಬಂದ, ಎಚ್. ನಾಗವೇಣಿ

೨೦. ಪುಟ ೧೮೪, ಗಾಂಧಿ ಬಂದ, ಎಚ್. ನಾಗವೇಣಿ

೨೧ ಪುಟ ೧೮೬, ಗಾಂಧಿ ಬಂದ, ಎಚ್. ನಾಗವೇಣಿ

೨೨ ಪುಟ ೩೫೭, ಗಾಂಧಿ ಬಂದ, ಎಚ್. ನಾಗವೇಣಿ

# ಅಧ್ಯಾಯ – ೬

## ಪ್ರಮುಖ ಪಾತ್ರಗಳ ಚಿತ್ರಣ

ಈ ಕಾದಂಬರಿಯಲ್ಲಿ ಬರುವ ಪಾತ್ರಗಳು ಕ್ರಿಯಾಶೀಲವಾಗಿ ವರ್ತಿಸುತ್ತವೆ. ಎಲ್ಲಾ ಪಾತ್ರಗಳೂ ಜೀವಂತವಾಗಿವೆ. ಆದರೆ ಯವೊಂದು ಪಾತ್ರವೂ ಮುಖ್ಯವಾಗದ ಸಮುದಾಯದ ಕಾದಂಬರಿ ಕೊರಗರ ಐತುವಿನಿಂದ ಕಾರ್ನಾಡರವರೆಗೆ, ಜೀವಂತ ಪಾತ್ರಗಳಾಗಿವೆ. ದ್ರೌಪದಿ, ದಾರು, ಮಾರಪ್ಪ ಅದ್ರಾಮನಂಥ ಜ್ವಲಂತ ಪಾತ್ರಗಳು ಸವಾಲಾಗಿ, ಸೆಟೆದು ನಿಂತು ಮಾತಾಡುತ್ತವೆ. ಸಾಮಾಜಿಕ ವ್ಯವಸ್ಥೆಯ ಕ್ರೌರ್ಯ, ಹಿಂಸೆ, ಶೋಷಣೆಗಳ ವಿರುದ್ಧ ಬಂಡಾಯದ ದನಿಯೆತ್ತಿ ಮಾತಾಡುತ್ತವೆ. ಸ್ತ್ರೀ ಪಾತ್ರಗಳು ಎಲ್ಲ ಪರಿಸ್ಥಿತಿಯನ್ನು ದಿಟ್ಟವಾಗಿ ಎದುರಿಸುತ್ತವೆ. ಪಾತ್ರಗಳ ನಡೆ ನುಡಿಗಳಿಂದಲೇ ನಾವು ಆಯಾ ಪಾತ್ರಗಳ ಗುಣ–ಸ್ವಭಾವ – ಮನೋಧರ್ಮಗಳನ್ನು ಅರಿಯಬಹುದು.

ಪ್ರಮುಖ ಪಾತ್ರಗಳು:

ಗಾಂಧೀಜಿ

ಪಟೇಲ ಸೀನಪ್ಪಯ್ಯ ಹೆಬ್ಬಾರರು

ದ್ರೌಪದಿ

ದಾರು

ಅದ್ರಾಮ

ಮಾರಪ್ಪ

ಪುಟ್ಟಮ್ಮಕ್ಕ

ಇಲ್ಲಿ ನಾವು ಲಕ್ಷ್ಯದಲ್ಲಿಡಬೇಕಾದ ಮಾತೆಂದರೆ ರಾಷ್ಟ್ರೀಯವಾದದ ಕ್ರಾಂತಿಕಾರೀ ಬೆಳವಣಿಗೆಯ ಸಂದರ್ಭದಲ್ಲಿ ನಡೆದ ಯಾವುದೇ ಸಾಂಸ್ಕೃತಿಕ ಪ್ರಕ್ರಿಯೆಯ ಬಗ್ಗೆ ಮಾತನಾಡುವಾಗ, ನಾವು ಒಂದೇ ಪ್ರಾಂತ್ಯಕ್ಕೆ, ಒಂದೇ ಭಾಷೆಗೆ ಸೀಮತವಾದ ರೀತಿಯಲ್ಲಿ ಮಾತಾಡುವುದು ಸರಿಯಾಗುವುದಿಲ್ಲ. ೧೯೨೦ ರಿಂದ ಪ್ರಾರಂಭವಾದ ಗಾಂಧೀಯುಗ ಭಾರತದ ಇತಿಹಾಸದಲ್ಲೇ ಅತ್ಯಂತ ಮಹತ್ತರವಾದ ಯುಗ, ಅತ್ಯಂತ ಪರಿವರ್ತನಾಶೀಲವಾದ, ಪುನರುಜ್ಜೀವನದ ಕಾಲ. ಮೊದಲಿನ ಎರಡು ದಶಕಗಳಲ್ಲಿ ಪರಿವರ್ತನೆಯ ಗಾಳಿ ಸಮಾಜದ ಕೆಲವೇ ಸ್ತರಗಳಲ್ಲಿ ಹರಿದಾಡಿದರೆ, ಮೂರನೆಯ ದಶಕದಿಂದ

ಸಮಾಜದ ಎಲ್ಲ ಸ್ತರಗಳಿಗೂ ಮೇಲಿನಿಂದ ಹಿಡಿದು ಕೆಳಗಿನ ಹರಿಜನರವರೆಗೂ ಮತ್ತು ಮಾನವ ಸಮುದಾಯಕ್ಕೆ ಪರಿವರ್ತನೆಯ ಗಾಳಿ ಒಂದು ಸುಂಟರಗಾಳಿಯಾಗಿ ಎಲ್ಲರನ್ನೂ ಬಡಿದೆಬ್ಬಿಸಿತು. ಜಲಿಯನ್ ವಾಲಾಬಾಗ ನಲ್ಲಿ ನಡೆದ ಹತ್ಯಾಕಾಂಡದ ನಂತರ, ಭಾರತೀಯ ಸ್ವಾತಂತ್ರ್ಯ ಚಳುವಳಿ ಅತ್ಯಂತ ಕ್ರಿಯಾಶೀಲವಾಯಿತು. ಗಾಂದೀಜಿಯವರ ನೇತೃತ್ವದಲ್ಲಿಯ ಬಹುಮುಖವಾದ ಅಂದರೆ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಈ ಎಲ್ಲ ಮುಖಗಳುಳ್ಳಂಥ ಚಳುವಳಿಯ ಚೈತನ್ಯವು ಆದರ್ಶವಾದದ ಪ್ರವೃತ್ತಿಯನ್ನು ಎಲ್ಲೆಡೆಗೂ ಹಬ್ಬಿಸಿತು. ಆದರ್ಶವಾದ ಜೊತೆಗೆ ಪರಂಪರೆಯಿಂದ ಬೇರೆಯಾಗಲು ಬೇಕಾದ ವ್ಯಕ್ತಿವಾದವೂ ಬಂತು. ಈ ಎಲ್ಲ ರೀತಿಯ ಅರಿವಿನ ಜೊತೆ ಕರ್ನಾಟಕದ ಅಸ್ಮಿತೆಯ ಅರಿವೂ, ಕನ್ನಡ ಭಾಷೆಯ ಅರಿವೂ ಮೂಡಿ ಬಂದವು. ರಾಷ್ಟ್ರೀಯ ಸ್ವಾತಂತ್ರ್ಯದ ಕಲ್ಪನೆಯ ಜೊತೆಗೆ ವ್ಯಕ್ತಿ ಸ್ವಾತಂತ್ರ್ಯದ ಕಲ್ಪನೆಯೂ ಬಂತು. ಸಮಾಜ ಸುಧಾರಣೆಯ ಕಲ್ಪನೆಯ ಜೊತೆಗೆ ಆತ್ಮೋದ್ಧಾರದ ಕಲ್ಪನೆಯೂ ಬಂತು. ಅಂತೇ ಗಾಂದೀಜಿಯವರ ಸಾಬರಮತಿ – ವರ್ಧಾ ಆಶ್ರಮಗಳೂ, ಟಾಗೋರರ ಶಾಂತಿನಿಕೇತನವೂ, ಪಾಂಡೀಚೆರಿಯ ಅರವಿಂದಾಶ್ರಮವೂ ಹೊಸ ಯಾತ್ರಾಸ್ಥಳಗಳಾದವು. ಗಾಂಧೀಯುಗದ ರೀತಿಗಳು, ಸಾಮಾಜಿಕ ಆದರ್ಶವಾದೀ ರೀತಿ, ಸಾಮಾಜಿಕ ವಾಸ್ತವವಾದೀ ರೀತಿ, ಇವೆರಡರಲ್ಲಿ ಗಾಂಧೀ ಯುಗದಲ್ಲಿ ಮೊದಲನೆಯ ರೀತಿಗೆ ಹೆಚ್ಚು ಪ್ರಾಶಸ್ತ್ಯವಿತ್ತು.

ಕರ್ನಾಟಕದ ಮೈಲಾರ ಮಹಾದೇವಪ್ಪನ ನಾಯಕತ್ವದಲ್ಲಿ ಬಂದ ಕನ್ನಡದ ಸ್ವಯಂ ಸೇವಕರು ಈ ದಂಡಯಾತ್ರೆಯಲ್ಲಿ ಭಾಗವಹಿಸದರು. ಎಂ.ಪಿ. ನಾಡಕರ್ಣಯವರ ನೇತೃತ್ವದಲ್ಲಿ ರಚನೆಗೊಂಡ ಕಾಂಗ್ರೆಸ್ ಸಮಿತಿಯ ಗಂಗಾಧರರಾವ್ ದೇಶಪಾಂಡೆ, ಟಿ.ಎಸ್. ನಾಯಕ್, ಡಾ. ಹರ್ಡೀಕರ್, ಕಾರ್ನಾಡ್ ಸದಾಶಿವರಾಯರು ಮೊದಲಾದವರು ೧೯೩೦ ಏಪ್ರಿಲ್ ೧೩ ರಿಂದ ಅಂಕೋಲದಲ್ಲಿ ಉಪ್ಪಿನ ಸತ್ಯಾಗ್ರಹವನ್ನು ನಡೆಸಿದರು. ಈ ಸತ್ಯಾಗ್ರಹದಲ್ಲಿ ಕರ್ನಾಟಕದ ವಿವಿಧ ಭಾಗಗಳಿಂದ ಬಂದ ಸಾವಿರಾರು ಜನರು ಪಾಲ್ಗೊಂಡರು. ಸುಮಾರು ೪೫ ದಿವಸಗಳ ಕಾಲ ಮಂಗಳೂರು, ಉಡುಪಿ, ಕುಂದಾಪುರ, ಸಿದ್ಧಾಪುರ, ಸಿರಸಿ, ಮುಂತಾದ ಕಡೆಗಳಲ್ಲಿ ಉಪ್ಪಿನ ಸತ್ಯಾಗ್ರಹ ನಡೆಸಿದರು. ವಿದೇಶಿ ವಸ್ತುಗಳ ಬಹಿಷ್ಕಾರ, ಅರಣ್ಯ ಸತ್ಯಾಗ್ರಹ, ಕರನಿರಾಕರಣೆ, ಪಾನನಿರೋಧ ಮುಂತಾದ ಚಟುವಟಿಕೆಗಳು ಯಶಸ್ವಿಯಾಗಿ ನಡೆದವು.

ಈ ಕಾದಂಬರಿಯಲ್ಲಿ ಗಾಂಧಿ ಮೂರು ಬಾರಿ ಬಂದು ಹೋಗುತ್ತಾರೆ. ಬಂದು ಹೋದ ಹಿನ್ನಲೆಯಲ್ಲಿ ಶೂದ್ರರ ಮನ: ಪರಿವರ್ತನೆ, ಚರಕ ನೂಲುವುದು, ವಿಧವೆಯರ ಮರು ವಿವಾಹ, ಶೂದ್ರರಿಗೆ ದೇವರ ಕೋಣೆಯಲ್ಲಿ ಮಣೆ ಇಕ್ಕುವುದು ಈ ಎಲ್ಲ ಹಿನ್ನಲೆಯಲ್ಲಿ ಗಾಂಧಿಯವರು ಅವರಲ್ಲಿ ಒಬ್ಬ ಮಹಾನ್ ವ್ಯಕ್ತ ಎನಿಸಿದ್ದಾರೆ. ಈ ಹಿನ್ನಲೆಯಲ್ಲಿ ಕರ್ನಾಟಕದಾದ್ಯಂತ ಗಾಂಧಿ ಪ್ರಭಾವ ಜನರ ಮೇಲೆ ಎಷ್ಟರ ಮಟ್ಟಿಗೆ ಬೀರಿದೆ ಎಂಬುದನ್ನು ಇಲ್ಲಿ ಮನಗಾಣಬಹುದು.

ಹೆಬ್ಬಾರರು ಕಾದಂಬರಿಯಲ್ಲಿ ಪ್ರಮುಖ ಕೇಂದ್ರ ಪಾತ್ರ. ಈ ಪಾತ್ರ ಕಾದಂಬರಿಯ ಖಳನಾಯಕನಾಗಿರುವುದು ವೈಶಿಷ್ಟ್ಯ. ಹೆಬ್ಬಾರರು ಜಮೀನ್ದಾರಿಕೆಯ ಜೊತೆಗೆ ಕ್ರೌರ್ಯ ಸ್ವಭಾವದವರಾಗಿದ್ದರು. ಹೆಬ್ಬಾರರು ಸಂಪ್ರದಾಯಸ್ಥರು. ಮಡಿ, ಆಚಾರವುಳ್ಳವರು,. ಇವರಲ್ಲಿ ಭಕ್ತಿಗಿಂತ ಭಯವೇ ಆವರಿಸಿದೆ. ಕಂಬಳದ ದಿನ ಬ್ರಾಹ್ಮಣರಿಗೆ ಊಟ ಹಾಕುವಾಗ ಯಾವುದೇ ಜಿಪುಣತನ ತೋರಿಸುವುದಿಲ್ಲ. ಶೂದ್ರರಿಗೆ ಊಟ ಹಾಕುವಾಗ ಐಸುಣತನ ತೋರುವುದಿದೆ. ಶೆಟ್ಟರಿಗೆ, ಒಕ್ಕಲ ಮಕ್ಕಳಿಗೆ ಇವರ ಮೇಲೆ ಅಸಮಧಾನವಿದೆ. ಕಂಬಳಕ್ಕೆ ಬೇಕಾಗುವ ಎಲ್ಲ ಸಹಾಯವನ್ನು ಶೂದ್ರರ ಮಕ್ಕಳಿಂದ ಗುತ್ತಿನ ಒಡೆಯರಿಂದ ಪಡೆದುಕೊಂಡರೂ ಅವರನ್ನು ಜಾತಿ ಭೇದ ಮಾಡುವುದಿದೆ. ಅವರಲ್ಲಿ ಧರ್ಮದ ಬಗ್ಗೆ ಹೇಳಿ ಭಯ ಹುಟ್ಟಿಸುವುದಿದೆ. ಹೆಬ್ಬಾರರು ಸ್ವತ: ತಮ್ಮ ಮಗಳು ದ್ರೌಪದಿಗೆ ಮಡಿ ಹಿಡಿಸಿದ್ದರು. ಅವರು ಮಾತ್ರ ಪುಟ್ಟಮ್ಮಕ್ಕನಲ್ಲಿ ಅನುರಕ್ತರಾಗಿರುತ್ತಾರೆ. ಮಗಳನ್ನು ಮಾತ್ರ ಸಂಪ್ರದಾಯದ ಬಂಧನದಲ್ಲಿ ಇಡಿಸಿ, ಇವರು ಮಾತ್ರ ಸಂಪ್ರದಾಯ ಕಟ್ಟಳೆಗಳನ್ನು ಮೀರುವಾಗ ಯಾವ ಧರ್ಮವೂ ಪ್ರಶ್ನಿಸುವುದಿಲ್ಲ. ಅದಕ್ಕೆ ಮಡಿ ಆಚಾರ ವಿಲ್ಲವೋ ಎಂಬ ಪ್ರಶ್ನೆ ಕಾಡುತ್ತದೆ. ಹೆಬ್ಬಾರರ ಸಮಯ ಸಾಧಕತನ, ಕುತ್ಸಿಕತನ, ಹೊಟ್ಟೆಕಿಚ್ಚು, ವಿಶ್ವಾಸ ದ್ರೋಹ ಬಗೆಯುವುದು ಈ ಎಲ್ಲ ವ್ಯಕ್ತಿತ್ವವನ್ನು ಹೊಂದಿದ ಪಾತ್ರವಾಗಿದೆ.

ಅದ್ರಾಮ ಮತ್ತು ದ್ರೌಪದಿಯರ ಪ್ರೀತಿಗೆ ಹೆಬ್ಬಾರರು ಅಡ್ಡಗೋಡೆಯಾಗುತ್ತಾರೆ. ಅವರ ಜಾತಿ, ಧರ್ಮ, ಅಂತಸ್ತುಗಳನ್ನು ಕಾಪಾಡಿಕೊಳ್ಳಲು ಅದ್ರಾಮನನ್ನು ಮಟ್ಟ ಹಾಕಲು ಯೋಜನೆಯೊಂದನ್ನು ಹಾಕುವರು. ಅದ್ರಾಮ, ದ್ರೌಪದಿಯರ ವಿಷಯವನ್ನು ತನ್ನ ಹೆಂಡತಿಗೆ ಅರುಹಿ, ದ್ರೌಪದಿಯನ್ನು ರುಕುಮಣಿಯಮ್ಮನ ಸುಪರ್ದಿಯಲ್ಲಿ ಬಿಟ್ಟು ಹೆಬ್ಬಾರರು ತನ್ನ ಮಗಳ ಬಗ್ಗೆ ಚಿಂತಿರರಾಗದೆ, 'ಇನ್ನು ಸನಾತನ ಧರ್ಮದ ಕೋಟೆ ಕುಸಿಯುವಂತಿಲ್ಲ' ಎಂದು ನೆಮ್ಮದಿ, ನಿಶ್ಚಿಂತೆ, ನಿರ್ಭಯದಿಂದ ಓಡಾಡಿಕೊಂಡಿದ್ದಾರೆ' ಗುತ್ತಿನ ಒಡೆಯರು ಗಾಂಧಿ ನಿಧಿಗೆ ಕೊಟ್ಟ ನಗದು ಬಂಗಾರವನ್ನು ತಾನೇ ಲಪಟಾಯಿಸುವುದು. ಪುಟ್ಟಮ್ಮಕ್ಕನ ಆಸ್ತಿಯನ್ನು ತನ್ನ ಹೆಸರಿಗೆ ಮಾಡಿಕೊಳ್ಳುವುದು. ಈ ಎಲ್ಲ ಕೆಟ್ಟ ಗುಣಗಳನ್ನು ಹೆಬ್ಬಾರರು ಹೊಂದಿದ್ದಾರೆ.

ಹೆಬ್ಬಾರರ ಮಗಳು ದ್ರೌಪದಿ ಹದಿನಾರನೇ ವಯಸ್ಸಿನಲ್ಲೇ ಗಂಡನನ್ನು ಕಳೆದುಕೊಂಡ ವಿಧವೆ. ಕಾದಂಬರಿಯ ಪ್ರಮುಖ ಕೇಂದ್ರ ಪಾತ್ರ. ವಿಧವೆಯಾಗಿ ಕೇಶ ಮುಂಡನ ಮಾಡಿಕೊಂಡಿಸಿರುವವಳು. ಧರ್ಮಸೂಕ್ಷ್ಮಜ್ಞರಾದ ಹೆಬ್ಬಾರರು ಮಗಳ ಬದುಕು ಬೋಳಾದೊಡನೆ, ಧರ್ಮವಿರೋಧಿಯಾಗದೆ ಆಕೆಯ ವಿರೋಧ – ಬಿಕ್ಕಳಿಕೆಯ ನಡುವೆಯೇ ಆಕೆಯ ತಲೆಯನ್ನೇನೋ ಬೋಳಿಸಿದರು. ಆದರೆ ಆಕೆಯ ಜೀವನದ ನೈಸರ್ಗಿಕ ಒತ್ತಡಗಳನ್ನು ಮಾತ್ರ ಅವರು ಬೋಳಿಸದಾದರು. ಬೋಳಿಸಿದಂತೆಲ್ಲ ಮತ್ತೆ ಮತ್ತೆ

ಚಿಗುರಿ ಬೆಳೆದ ಕೂದಲಂತೆಯೇ ಆಕೆಯೊಳಗೆ ಚಿಗುರಿ ಬರುವ ಬಯಕೆ, ಭಾವನೆ, ಹಂಬಲಗಳನ್ನು ಅದುಮಿಡುವ ಶಕ್ತಿ ಆ ಎಳೆ ಜೀವಕ್ಕೆ ಆಕೆಯ ಜೀವನವನ್ನೇ ಧ್ವಂಸ ಮಾಡುತ್ತಿದೆ. ಅದ್ರಾಮ ಮತ್ತು ದ್ರೌಪದಿಯರಲ್ಲಿ ಪ್ರೀತಿ ಮೊಳಕೆಯೊಡೆಯುತ್ತಿದೆ. ಅದನ್ನು ಚಿಗುರಲು ಹೆಬ್ಬಾರರು ಬಿಡುತ್ತಿಲ್ಲ. ಗುತ್ತಿನೊಡೆಯರು ಹೆಬ್ಬಾರರ ಮೇಲೆ ಸೇಡನ್ನು ತೀರಿಸಿಕೊಳ್ಳಲು ಆ ಪ್ರೀತಿಗೆ ನೀರೆರೆದು ಪೋಷಿಸುತ್ತಿದ್ದಾರೆ ಅದ್ರಾಮನ ಮೂಲಕ. ದ್ರೌಪದಿಯ ಮಾವನ ಮನೆಗೆ ಹೋದಾಗ ದ್ರೌಪದಿ ಅದ್ರಾಮನ ಜೊತೆ ಓಡಿ ಹೋಗಿ ಮದುವೆಯಾಗುತ್ತಾಳೆ. ಒಂದು ಮಗುವಿನ ತಾಯಿಯೂ ಆಗುತ್ತಾಳೆ. ಅದ್ರಾಮ ಸ್ವಾತಂತ್ರ್ಯ ಚಳುವಳಿಯ ಹೋರಾಟದಲ್ಲಿ ಸಾವಿಗೀಡಾಗುತ್ತಾನೆ. ಮತ್ತೆ ದ್ರೌಪದಿ ವಿಧವೆ ಪಟ್ಟವನ್ನು ಅಪ್ಪುತ್ತಾಳೆ. ಇಲ್ಲಿ ದ್ರೌಪದಿಗೆ ಅದ್ರಾಮನ ಸಾಮೀಪ್ಯ ದೊರೆಯುವುದೇ ಇಲ್ಲ. ಗಾಂಧಿಯವರು ದ್ರೌಪದಿಗೆ ಕುಂಕುಮ, ಹೂವು ಒಡವೆಗಳನ್ನು ಧರಿಸಲು ಕೊಟ್ಟ ನೀನು ಹೀಗೆ ಇರು ಎಂದು ಆಶೀರ್ವದಿಸುತ್ತಾರೆ. ಇವಳಿಗೆ ಗುತ್ತಿನ ಶೆಟ್ಟರ ಸೂರಕ್ಕೆ, ದಾರು, ಮಾರಪ್ಪ, ಒಕ್ಕಲಾಳುಗಳ ಬೆಂಬಲ, ಪ್ರೀತಿ, ವಿಶ್ವಾಸ ಇವುಗಳ ನಡುವೆ ಬಾಳಲು ನಿರ್ಧಾರ ಮಾಡುತ್ತಾಳೆ.

ದಾರು ಜಾರಿಗೆ ಬೆಟ್ಟಿನ ಸುಬ್ಬಯ್ಯ ಶೆಟ್ಟರ ಒಬ್ಬಳೇ ಮುದ್ದಿನ ಮಗಳು, ನೋಡಲು ಬಹಳ ಸುಂದರಿ. ಗುಣದಲ್ಲೂ ಅಪ್ಪಟ ಚಿನ್ನ. ದಾರುವಿನ ಬಾಲ್ಯ ಮುಗಿದು, ಯೌವನಾವಸ್ಥೆಗೆ ಕಾಲಿಟ್ಟಿತು. ಆ ಯೌವನಾವಸ್ಥೆಗೆ ಬೇಕಾಗಿರುವ ತಿರುಳೇ ಮೊಳೆತು ಬರಲಿಲ್ಲ ಈ ಚಿಂತೆಯಲ್ಲಿ ಶೆಟ್ಟರು ಮತ್ತವರ ಹೆಂಡತಿ ಸಾಸಿಯಕ್ಕ ಕೊರಗಿ ಕೊರಡಾದರು.  ದು:ಖವನ್ನು ತಮ್ಮೊಳಗೇ ಬಚ್ಚಿಟ್ಟುಕೊಂಡು ವೇದನೆ ಪಡುತ್ತಿದ್ದರು. ಹೇಳಿಕೊಳ್ಳುವ ಸಮಸ್ಯೆಯೂ ಅಲ್ಲ. ದಾರುವಿನ ತಂದೆ ಕಂಡ ಕಂಡ ದೈವ – ದೇವರಿಗೆ ಹರಕೆ ಹೊತ್ತರು. ಕೊನೆಗೆ ಮಂಗಳೂರಿನ ಆಸ್ಪತ್ರೆಯಲ್ಲಿ ಪರೀಕ್ಷೆ ಮಾಡಿದ ವೈದ್ಯರು ನಿಮ್ಮ ಮಗಳಿಗೆ ಗರ್ಭ ಕೋಶವೇ ಮೊಳೆತಿಲ್ಲ ಎಂದು ತಿಳಿದು ಸುಬ್ಬಯ್ಯ ಶೆಟ್ಟರು ಮೂರ್ಛೆ ಹೋಗುತ್ತಾರೆ.

ಈ ಸುದ್ದಿಯಿಂದ ದಾರು ಬಳಲಿ ಬೆಂಡಾಗಿ ಶಿಖಂಡಿ ಪಟ್ಟ ಹೊತ್ತು ಅಡುಗೆ ಮನೆಯೊಳಗಡೆ ಬಂಧಿಯಾಗಿ, ಬೆಂಕಿ ಉರಿಸಿ – ನಂದಿಸುವ ಕಾಯಕದಲ್ಲಿ ಏಳು ಸಂವತ್ಸರಗಳನ್ನು ಕಳೆದಿದ್ದಾಳೆ. ಕಿತ್ತು ತಿನ್ನುವ ಏಕಾಕಿತನ, ಮನಸ್ಸಿನ ಮಧುರ ಭಾವನೆಗಳನ್ನು, ನೈಸರ್ಗಿಕವಾದ ದೈಹಿಕ ಒತ್ತಡಗಳನ್ನು ಅದುಮಿಡಲಾರದೆ ಜೀವಂತ ಶವವಾದಳು. ದಾರು ತನ್ನ ತಾಯಿಯನ್ನೂ ಕಳೆದುಕೊಳ್ಳುತ್ತಾಳೆ. ಮಾರಪ್ಪ ದಾರುವನ್ನು ಮದುವೆಯಾಗಿ ಸಮಾಜದ ಕುಹಕ ನೋಟದಿಂದ ತಪ್ಪಿಸಿದರೂ, ಮಾರಪ್ಪ ಅವಳ ಆಸೆ ಭಾವನೆಗಳನ್ನು ಅರ್ಥ ಮಾಡಿಕೊಳ್ಳುವುದಿಲ್ಲ. ದಾರು ತನ್ನ ಅತ್ತೆಯ ಜೊತೆ ನೋವನ್ನು ನುಂಗಿಕೊಂಡು ತಕಲಿ ಹಿಡಿದು ನೂಲಲು ತೊಡಗುತ್ತಾಳೆ.  ಸ್ವಾತಂತ್ರ್ಯ ಚಳುವಳಿಯಲ್ಲಿ ಮಾರಪ್ಪನಿಗೆ ಪೋಲಿಸರಿಂದ

ಹೊಡೆತ ತಿಂದು ಚೆನ್ನಾಗಿ ಪೆಟ್ಟು ಬಿದ್ದು ಹಾಸಿಗೆ ಹಿಡಿಯುತ್ತಾನೆ. ದಾರು ಆ ಸಂದರ್ಭದಲ್ಲಿ ಮಾಡಿದ ಸೇವೆ ಮತ್ತೆ ಎರಡು ಹೃದಯಗಳು ಒಂದಾಗುತ್ತವೆ. ದಾರುವಿಗೆ ಎಲ್ಲ ರೀತಿಯ ಸುಖ ದೊರೆಯುತ್ತದೆ. ಗಾಂಧಿ ನಿಧಿಗೆ ತನ್ನೆಲ್ಲ ಒಡವೆಗಳನ್ನು ಅರ್ಪಿಸುತ್ತಾಳೆ.

ಮಾರಪ್ಪ ದೇಶ ಭಕ್ತ. ಗಾಂಧಿ ನಿಧಿಗಾಗಿ ಹಳ್ಳಿ ಹಳ್ಳಿಗೆ ಹೋಗಿ ನಿಧಿ ಸಂಗ್ರಹ ಕಾರ್ಯದಲ್ಲಿ ತೊಡಗಿದ್ದ. ಸಾರಾಯಿ ಅಂಗಡಿಗಳನ್ನು ಮಟ್ಟ ಹಾಕಲು ಸತ್ಯಾಗ್ರಹ ನಡೆಸುತ್ತಿದ್ದರು. ಅದ್ರಾಮ ಇವನ ಸ್ನೇಹಿತ. ಇವನಲ್ಲಿ ಒಳ್ಳೆಯ ಗುಣ. ಇನ್ನೊಬ್ಬರ ನೋವಿಗೆ ಮಿಡಿಯುವವನು. ತಾಯಿ ಸೂರಕ್ಕೆ ಮಾತ್ರ ಮಗನನ್ನು ಬೈಯ್ಯುವವಳು. ಮಾರಪ್ಪ ಚಳುವಳಿ, ಸ್ವಾತಂತ್ರ್ಯ ಎಂದು ಮನೆ ಕಡೆ ಬಗ್ಗೆ ತಲೆ ಕೆಡಿಸಿಕೊಂಡಿದ್ದಿಲ್ಲ. ಎಲ್ಲದಕ್ಕೂ ಸೂರಕ್ಕೆಯೇ ಮಾಡಬೇಕಾಗಿ ಬರುತ್ತಿತ್ತು. ದಾರುವಿನ ಮದುವೆಯಾಗಲು ಸೂರಕ್ಕೆಯು ಒಪ್ಪಿದರು. ಅವಳನ್ನು ಮದುವೆಯಾದರೂ 'ಶಿಖಂಡಿ' ಎಂಬ ಮುಜಗರದಿಂದ ದಾರುವನ್ನು ಮುಟ್ಟುವುದಿಲ್ಲ. ಕಳ್ಳು, ಗಂಗಸರ ಕುಡಿಯಬೇಡಿರೆಂದು ಒಕ್ಕಲಾಳುಗಳ ಮನವೊಲಿಸುತ್ತಾ ಅವರ ಜೀವನವನ್ನು ಸುಖಮಯ ಮಾಡಲು ಶ್ರಮ ಪಡುತ್ತಿದ್ದ. ಗುತ್ತಿನ ಆಸ್ತಿಯಲ್ಲಿ ಪಾಲಿದ್ದರೂ ಮಾರಪ್ಪ ಯಾವತ್ತೂ ಬಯಸಿಲ್ಲ. ಮಾರಪ್ಪನಲ್ಲಿ ಕಾಣುವುದು ಖಾದಿ ಪ್ರಚಾರ, ಮಾರಾಟ, ಹರಿಜನ ಉದ್ಧಾರ, ಮಧ್ಯಪಾನ ನಿಷೇದ... ಇವುಗಳ ಸಮಸ್ಯೆಗಳನ್ನು ಪರಿಹಾರ ಮಾಡುವುದು. ಸ್ವಲ್ಪ ಬೇಜವಾಬ್ದಾರಿಯಿಂದ ನಡೆದುಕೊಳ್ಳುವುದು. ಅದ್ರಾಮ – ದ್ರೌಪದಿಯರ ಮದುವೆಗೆ ಸಹಕರಿಸಿದುದು ಈತನೇ ಅದ್ರಾಮ ಸತ್ತ ನಂತರವೂ ದ್ರೌಪದಿಯನ್ನು ನೋಡಿಕೋಳ್ಳುತ್ತಾನೆ.

ಅದ್ರಾಮ ಮೈದಿನ್ ಬ್ಯಾರಿಯವರ ಮಗ. ಜಟಕ ಅದ್ರಾಮ ರುಕುಮಣಿಯಮ್ಮನ ತವರೂರು ತಡಂಬೈಲಿನ ಮಾರಿಗುಡಿಯವನು. ಮೀನಿನ ಬ್ಯಾರಿ ಮೈದಿನಬ್ಬನ ಹಿರಿಮಗ. ಅದ್ರಾಮನನ್ನು ಒಳ್ಳೆಯ ಹುಡುಗನೆಂದು ಬ್ರಾಹ್ಮಣರಾದಿಯಾಗಿ ಹೊಗಳುವರೆ. ಆದರೇನು? ಮೈದಿನ್ ಬ್ಯಾರಿಯವರು ಮಾತ್ರ 'ಇಂವ ಮನೆಗೆ ಮಾರಿ, ಊರಿಗೆ ಉಪಕಾರಿ' ಎಂದು ಎಲ್ಲರೆದುರು ಹಂಗಿಸುತ್ತಿರುತ್ತಾರೆ. ಅದ್ರಾಮ ಯಾರ ಹೊಗಳಿಕೆಗೂ ಬಯಸಿ ಕೆಲಸ ಮಾಡುವವನಲ್ಲ. ಅವನ ಹುಟ್ಟು ಗುಣವೇ ಪರರ ಕಷ್ಟಕ್ಕೆ ಒದಗುವಂತದ್ದು. ಎಲ್ಲಾರಿಗೂ ಬೇಕಾದವನು ಹೆಬ್ಬಾರರಿಗೆ ಮಾತ್ರ ಬೇಡವಾದವ. ಮೊನ್ನೆ ಮೊನ್ನೆ ಬೇಕಾಗಿದ್ದವ ಇದ್ದಕ್ಕಿದ್ದಂತೆ ಬೇಡವಾಗಲು ಕಾರಣ ಇಷ್ಟೆ. ಹೆಬ್ಬಾರರು ಅದ್ರಾಮನ ಜಟಕಾ ನೋಡಿ ನಿಲ್ಲಿಸಿ, 'ನೋಡಾ... ಹಾಗೆ ಹೋಗುವಾಗ ಹೊನ್ನಕಟ್ಟೆಯಲ್ಲಿ ಸ್ವಲ್ಪ ಜಟಕಾ ನಿಲ್ಲಿಸಿ, ಮಾಬಲ ಭಂಡಾರಿಯನ್ನು ಕಳಿಸಿಕೊಂಡು ದ್ರೌಪದಿಯ ತಲೆ ಬೋಳಿಸುವುದಿದೆ ಎಂದು ಹೇಳಿದ್ದಾರಷ್ಟೆ. ಅದ್ರಾಮನಿಗೆ ಏನನ್ನಿಸಿತೋ 'ತಲೆ

ಬೋಳಿಸಿದರೆ ಆಕೆಯ ಬದುಕು ಮರಳಿ ಬರುತ್ತಾ ಭಟ್ರೇ ... ಮೊದಲು ಆಕೆಗೊಂದು ಮದುವೆ ಮಾಡಿ ಬಿಡಿ ಎಂದು ಹೇಳುತ್ತಾನೆ. ಅದ್ರಾಮ ಒಕ್ಕಲ ಮಕ್ಕಳಿಗೂ ಬೇಕಾದವ.

ಅದ್ರಾಮ ಮತ್ತು ದ್ರೌಪದಿ ಇವರಿಬ್ಬರ ಮಧ್ಯೆ ಹೆಬ್ಬಾರರು ಅಡ್ಡಗೋಡೆಯಾಗಿದ್ದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಅಷ್ಟೇ ಬಿರುಸಾಗಿ ಹೋರಾಟದಲ್ಲಿ ಭಾಗವಹಿಸುತ್ತಾನೆ. ಅವನು ಯಾವತ್ತೂ ಜಾತಿ, ಧರ್ಮಕ್ಕೆ ಬೆಲೆ ಕೊಟ್ಟವನಲ್ಲ. ಒಂದು ದಿನವೂ ನಮಾಜು ಮಾಡಿಲ್ಲ. ನಿರ್ಮಲವಾದ ಸ್ನೇಹ ಮತ್ತು ಮನಸ್ಸೇ ದೇವಪ್ರಾರ್ಥನೆಗಿಂತ ಮಿಗಿಲಾದುದು ಎಂದು ನಂಬಿರುವವನು. ಗುತ್ತಿನ ಒಡೆಯರು ಹೆಬ್ಬಾರರ ಮೇಲೆ ಸೇಡು ತೀರಿಸಿಕೊಳ್ಳಲು ಅದ್ರಾಮನನ್ನೇ ಅಸ್ತ್ರವಾಗಿ ಉಪಯೋಗಿಸಿ ಅದ್ರಾಮ ದ್ರೌಪದಿಯರ ಮಿಲನಕ್ಕೆ ಅನುವು ಮಾಡುತ್ತಿದ್ದರು. ಅದ್ರಾಮ ದ್ರೌಪದಿಯನ್ನು ಮದುವೆಯಾದಾಗ ಹೆತ್ತವರು ಇಬ್ಬರನ್ನು ಕುರಿತು ಒಂದೊಂದು ರೀತಿ ಮಾತನಾಡುತ್ತಾರೆ. ಅದ್ರಾಮ ಇದ್ಯಾವುದಕ್ಕೂ ಮಣಿಯುವುದಿಲ್ಲ. ದ್ರೌಪದಿಗೆ ಒಂದು ಬದುಕನ್ನು ಕೊಟ್ಟವನು ಗುತ್ತಿನ ಒಡೆಯರು, ಮಾರಪ್ಪ, ದಾರು, ಸೂರಕ್ಕೆ, ಒಕ್ಕಲ ಮಕ್ಕಳು ಇವರ ಬೆಂಗಲಿಗರು, ಅದ್ರಾಮ ದ್ರೌಪದಿಯನ್ನು ಮದುವೆಯಾದರೂ ಯಾವುದೇ ರಿವಾಜು ಸಂಪ್ರದಾಯಗಳನ್ನು ಹೇರದೇ ಅವಳಿಷ್ಟಕ್ಕೆ ಬಿಟ್ಟಿದ್ದ. ಇದೆಲ್ಲ ಅವನ ಉದಾತ್ತ ಗುಣ ತಿಳಿಯುತ್ತದೆ. ಅದ್ರಾಮ ಚಳುವಳಿಯಲ್ಲಿ ಲಾರಿ ಏಟಿನಿಂದ ಪೆಟ್ಟು ಬಿದ್ದು ಪ್ರಜ್ಞಾಹೀನನಾಗಿ ಸಾಯುತ್ತಾನೆ. ಅವನನ್ನು ಬಂಟರ ರಿವಾಜಿನಲ್ಲಿ ಮಣ್ಣು ಮಾಡುತ್ತಾರೆ. ಅದ್ರಾಮ ಈ ಕಾದಂಬರಿಯ ಕೇಂದ್ರ ಪಾತ್ರ, ಅವನು ಧರ್ಮದ ಮೌಲ್ಯಗಳಿಗೆ ಕಟ್ಟುಬೀಳದೆ ಮಾನವೀಯತೆಯ ಭಾವವನ್ನು ಹೊಂದಿದ್ದ. ಎಲ್ಲರೊಡನೇ ಸ್ನೇಹದಿಂದಿರುತ್ತಿದ್ದ. ಜೀವನದಲ್ಲಿ ನೋವಾದವರಿಗೆ ಬೇಗ ಸ್ಪಂದಿಸುವ ಮನೋಭಾವವನ್ನು ಹೊಂದಿದ್ದ. ಗಾಂಧಿ ತತ್ವಗಳಿಗೆ ಬದ್ಧನಾಗಿದ್ದ. ವ್ಯಕ್ತಿತ್ವಕ್ಕೆ ಬೆಲೆ ಕೊಡುತ್ತಾನೆ. ಇವನನ್ನು ಕಂಡರೆ ಹೆಬ್ಬಾರರೊಬ್ಬರನ್ನು ಬಿಟ್ಟರೆ ಒಕ್ಕಲಾಳುಗಳಿಗೆ, ಶೆಟ್ಟರಿಗೆ, ಹೀಗೆ ಎಲ್ಲರಿಗೂ ಬೇಕಾದವನು.

ಪುಟ್ಟಮ್ಮಕ್ಕ – ಪುಟ್ಟಮ್ಮಕ್ಕ ನಾರ್ಣಭಟ್ಟರ ಹೆಂಡತಿ. ಭಟ್ಟರು ಪೌರೋಹಿತ್ಯ ಮಾಡಲು ಕೇರಳಕ್ಕೆ ಹೋಗಿ ಅಲ್ಲಿ ನೆಲೆ ಊರುತ್ತಾರೆ. ಪುಟ್ಟಮ್ಮಕ್ಕನನ್ನು ಹೆಬ್ಬಾರರ ಸುಪರ್ದಿಗೆ ಒಪ್ಪಿಸುತ್ತಾರೆ. ಹೆಬ್ಬಾರರು ಪುಟ್ಟಮ್ಮಕ್ಕನನ್ನು ತನ್ನ ಮೋಹದ ಬಲೆಯಲ್ಲಿ ಬೀಳಿಸಿಕೊಳ್ಳುತ್ತಾರೆ. ಪುಟ್ಟಮ್ಮಕ್ಕನಿಗೂ ಹೆಬ್ಬಾರರ ಅಗತ್ಯವಿತ್ತು. ಪುಟ್ಟಮ್ಮಕ್ಕ ಧರ್ಮದ ರೀತಿಯಿಂದ ಮಾಡಿದುದು ತಪ್ಪು. ಅಂತ ಅವರ ಮನಸ್ಸಿಗೆ ಅನಿಸುತ್ತಿತ್ತು. ಪುಟ್ಟಮ್ಮಕ್ಕನ ವ್ಯಕ್ತಿತ್ವ ಅಪ್ಪಟ ಚಿನ್ನ. ಪುಟ್ಟಮ್ಮಕ್ಕ ಒಕ್ಕಲಾಳುಗಳಿಗೆ ಸಹಾಯ ಮಾಡುತ್ತಿದ್ದಳು ಗಾಂಧಿಯನ್ನು ನೋಡುವ ಕಾತುರ, ಗಾಂಧಿ ನಿಧಿಗೆ ಅರ್ಪಿಸುವುದು, ದ್ರೌಪದಿ ಅದ್ರಾಮನನ್ನು ಕಳೆದುಕೊಂಡಾಗ ಬಂದು ಅವಳನ್ನು ಸಮಧಾನಿಸುವುದು. ಅವಳ ಮಗನಿಗಾಗಿ ಜಾತ್ರೆಯಲ್ಲಿ ಗೀಟು ಅಂಗಿ, ಗಿಲಕಿ ಕೊಂಡದ್ದು

ನಾರ್ಣಭಟ್ಟರು ಕೇರಳದಿಂದ ತಿರುಗಿ ಬಂದಾಗ ಪುಟ್ಟಮ್ಮಕ್ಕ ಅಸಹನೆಯಿಂದ ಮುಖ ತಿರುಗಿಸಿದರೂ, ತಾನು ಕರ್ತವ್ಯದಿಂದ ಹಿಂದಿರುಗುವುದಿಲ್ಲ. ಗಾಂಧಿಯನ್ನು ನೋಡಲು ಹೋಗಲು ಅವರು ದ್ವಂದ್ವ ಚಿಂತನೆಗೆ ಬೀಳುತ್ತಾರೆ. ರೋಗಿಷ್ಟ ಗಂಡನನ್ನು ಪೇಟೆಗೆ ಬಿಟ್ಟು ಹೊರಡುವುದೇ? ಸಮಾಜ ಏನನ್ನುತ್ತದೆ. ಧರ್ಮ ಅನ್ನುವುದು ಇದೆಯಲ್ಲ. ಅದೇ ಮಾನವ ಧರ್ಮ. ಮಾನವತೆ, ಏನಾದರೂ ಆಗಲಿ ಎಂದು ಗಂಡನನ್ನು ಕೇಳಿಯೇ ಬಿಡುತ್ತಾರೆ. ನಾರ್ಣಭಟ್ಟರು ನಾನು ಮುಖ್ಯವೋ? ಆ ಗಾಂಧಿ ಮುಖ್ಯಾನೋ? ಎಂದು ಹೇಳಿ ಮಲಗುತ್ತಾರೆ.

ಪುಟ್ಟಮ್ಮಕ್ಕ ತಳೆದ ನಿರ್ಧಾರ ಗಂಡನನ್ನು ಆರಿಸಿಕೊಂಡು ಗಾಂಧಿಯನ್ನು ಬದಿಗೊತ್ತಿದ್ದು ರೋಗಿಷ್ಟನೊಬ್ಬನ ದೈಹಿಕ ನೋವಿನ ಜತೆ ಮತ್ತಷ್ಟು ಮಾನಸಿಕ ನೋವು ಕೊಡುವುದು ಮನುಷ್ಯತ್ವವಲ್ಲ ಎಂಬ ಏಕೈಕ ಕಾರಣದಿಂದ ಗಾಂಧಿಯವರನ್ನು ನೋಡುವ ಆಸೆಗೆ ತಿಲಾಂಜಲಿ ಕೊಡುತ್ತಾರೆ.

# ಸಮಾರೋಪ

ಕನ್ನಡ ಕಾದಂಬರಿ ಸಾಹಿತ್ಯದಲ್ಲಿ ಎಚ್. ನಾಗವೇಣಿಯವರು ಪ್ರಮುಖರು. ಇಂದಿನ ಆಧುನಿಕ ಲೇಖಕಿಯರ ಸಾಲಿನಲ್ಲಿ ನಾಗವೇಣಿಯವರ ಹೆಸರು ಪ್ರಸಿದ್ಧ ಎಂದರೆ ತಪ್ಪಾಗಲಾರದು. ಪರಿಸರ ಪ್ರೇಮ, ಕರಾವಳಿ ತೀರ ಪ್ರದೇಶದ ಅನಾವರಣ, ಸಾಮಾಜಿಕ ಮೌಲ್ಯಗಳಿಗೆ ಅಭಿವ್ಯಕ್ತವಾಗುವ ಚಿಂತನಾ ಶೀಲತೆ ಮತ್ತು ಮರೆಯಾಗುತ್ತಿರುವ ಭಾರತೀಯ ಸಂಸ್ಕೃತಿಯನ್ನು ತಮ್ಮ ಕಾದಂಬರಿಯಲ್ಲಿ ಅಭಿವ್ಯಕ್ತ ಪಡಿಸಿರುವುದನ್ನು ಕಾಣಬಹುದು. ಹೀಗೆ ಸಂಸ್ಕೃತಿಯ ಉನ್ನತ ಮಟ್ಟವನ್ನು ದರ್ಶಿಸುವ ಅವರ 'ಗಾಂಧಿ ಬಂದ' ಕಾದಂಬರಿಯನ್ನು ಒಂದು ಸಾಂಸ್ಕೃತಿಕ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಸಾಹಿತ್ಯವು ಕಾಲಘಟ್ಟದಲ್ಲಿ ರಚಿತವಾದ ಸಾಹಿತ್ಯ ತನ್ನ ಭಿನ್ನ, ಉದ್ದೇಶ, ಮನೋಧರ್ಮ ಅಭಿವ್ಯಕ್ತಿಯಿಂದಾಗಿ ಹೊಸದೊಂದು ಪಂಥವಾಗಿಯೇ ಪ್ರಾರಂಭಗೊಳ್ಳುತ್ತದೆ. ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ – ಬಂಡಾಯವೆಂಬ ವಿಭಿನ್ನ ಸಾಹಿತ್ಯ ಪಂಥಗಳಲ್ಲಿ ಕಾಣಿಸಿಕೊಂಡಿವೆ. ಕಾವ್ಯ, ಸಣ್ಣಕಥೆ, ನಾಟಕ, ಕಾದಂಬರಿ ಮುಂತಾದ ಪ್ರಕಾರಗಳ ಮೂಲಕ ಕನ್ನಡ ಸಾಹಿತ್ಯ ಕ್ಷೇತ್ರವು ಶ್ರೀಮಂತಗೊಂಡಿರುವುದನ್ನು ಕಾಣುತ್ತೇವೆ. ಕನ್ನಡ ಕಾದಂಬರಿ ಕ್ಷೇತ್ರ ಕನ್ನಡ ಸಾಹಿತ್ಯದ ಇತ್ತೀಚಿನ ಕೊಡುಗೆಯಾದರೂ ತನ್ನ ಆಳ ವಿಸ್ತಾರಗಳನ್ನು ಹೆಚ್ಚಿಸಿಕೊಳ್ಳುತ್ತಲೇ ಇಂದು ಜನಪ್ರಿಯ ಸಾಹಿತ್ಯ ಪ್ರಕಾರವಾಗಿದೆ. ಕನ್ನಡ ಕಾದಂಬರಿ ಪ್ರಕಾರಗಳು ಕನ್ನಡ ಸಾಹಿತ್ಯದಲ್ಲಿ ಬೆಳೆದು ಬಂದ ಬಗೆ ಮತ್ತು ಆ ಕಾದಂಬರಿಗಳಲ್ಲಿ ವ್ಯಕ್ತಗೊಂಡಿರುವ ನೈಜ ಚಿತ್ರಣ, ಬದುಕಿನ ನೆಲೆ, ವಾಸ್ತವಿಕ ಪ್ರಜ್ಞೆ ಹಾಗೂ ಸಾಂಸ್ಕೃತಿಕ ಮೌಲ್ಯಗಳು ಹೇಗೆ ವ್ಯಕ್ತಗೊಂಡಿವೆ ಎಂಬುದನ್ನು ಆಯಾ ಕಾಲಘಟ್ಟದ ಕಾದಂಬರಿಗಳ ಹಿನ್ನಲೆಯಲ್ಲಿ ವಿವೇಚಿಸಲಾಗಿದೆ.

ಕನ್ನಡ ಕಾದಂಬರಿಗಾರ್ತಿಯರ ನಡುವೆ ಎಚ್. ನಾಗವೇಣಿಯವರ ಸ್ಥಾನ ಅಗ್ರಗಣ್ಯವಾದುದು. ನಾಗವೇಣಿಯವರ ಹಿರಿಯ, ಸಮಕಾಲೀನ ಹಾಗೂ ಅವರ ಓರಗೆಯ ಲೇಖಕಿಯರ ನಡುವೆ ಇರುವ ಸಾಮ್ಯಗಳು, ಭಿನ್ನತೆಗಳು, ಹಾಗೂ ವೈಷಮ್ಯಗಳನ್ನು ಇಲ್ಲಿ ಕೂಲಂಕಷವಾಗಿ ಚರ್ಚಿಸಲಾಗಿದೆ.

ನಾಗವೇಣಿಯವರ ಗಾಂಧಿಬಂದ ಕಾದಂಬರಿಯಲ್ಲಿ ತುಳು ಸಂಸ್ಕೃತಿಯ ಒಂದು ನೋಟವಿದೆ. ಈ ಸಂಸ್ಕೃತಿಯ ಆಚಾರ–ವಿಚಾರ, ನಡೆ–ನುಡಿ, ಪದ್ಧತಿ, ರೂಢಿ, ಸಂಪ್ರದಾಯ, ಆಚರಣೆಗಳು ಹೀಗೆ ಒಟ್ಟು ಸ್ವರೂಪದ ಹಿನ್ನಲೆಯಲ್ಲಿ ವಿಮರ್ಶಾತ್ಮಕವಾಗಿ ಚಿಂತಿಸಲಾಗಿದೆ.

'ಗಾಂಧಿ ಬಂದ' ಕಾದಂಬರಿಯಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ನೋಟಗಳು ಪ್ರಮುಖವಾಗಿವೆ. ಈ ಕಾದಂಬರಿಯಲ್ಲಿ ಕುಟುಂಬ, ಮಾತೃ ಪ್ರಧಾನ ಕುಟುಂಬ, ಸ್ತ್ರೀಯ ಸ್ಥಾನಮಾನ, ಜಾತಿ, ಪದ್ಧತಿ, ಪರಿಸರ ಹಾಗೂ ಮನುಷ್ಯ ಸಂಬಂಧಗಳು ಇವುಗಳಿಗೆ ಹೇಗೆ ಪೂರಕವಾಗಿವೆ ಹಾಗೂ ಅವುಗಳಿಂದ ಆಗುವ ಪರಿಣಾಮಗಳೇನು ಎಂಬುದನ್ನು ವಿಶ್ಲೇಷಣಾತ್ಮಕವಾಗಿ ಹೇಳುವ ಪ್ರಯತ್ನವನ್ನು ಮಾಡಲಾಗಿದೆ. ಸಾಂಸ್ಕೃತಿಕವಾಗಿ ಕಾದಂಬರಿಯಲ್ಲಿ ಬಂದಿರುವ ಮೌಲಿಕವಾದ ಅಂಶಗಳನ್ನು ಚರ್ಚೆಗೆ ಒಳಪಡಿಸಲಾಗಿದೆ.

ಈ ಕಾದಂಬರಿಯಲ್ಲಿ ಬರುವ ಕೆಲವು ಪಾತ್ರಗಳು ಪ್ರಮುಖ ಹಾಗೂ ಕಾದಂಬರಿಗೆ ಆಧಾರ ಸ್ತಂಭದಂತಿವೆ. ಅಂತೆಯೇ ಕಾದಂಬರಿಯ ಇಡೀ ಒಳನೋಟಕ್ಕೆ ಮತ್ತು ಕಾದಂಬರಿಯ ವಸ್ತು ವಿಶ್ಲೇಷಣೆಗೆ ಈ ಪಾತ್ರಗಳು ನಿರ್ವಹಿಸುವ ಪಾತ್ರವೇನು ಎಂಬುದನ್ನು ಇಲ್ಲಿ ಬರುವ ಹೆಬ್ಬಾರ, ದ್ರೌಪದಿ, ಮಾರಪ್ಪ, ಅದ್ರಾಮ, ದಾರು ಇನ್ನೂ ಮುಂತಾದ ಪಾತ್ರಗಳ ಹಿನ್ನಲೆಯಲ್ಲಿ ಪಾತ್ರ ವಿಶ್ಲೇಷಣೆಯನ್ನು ವಿವರವಾಗಿ ನೀಡಲಾಗಿದೆ.

ಹೀಗೆ ಕಾದಂಬರಿಯಲ್ಲಿ ಬರುವ ಮಾನವೀಯ ಅಂಶಗಳು ಸಾಮಾಜಿಕತೆ, ಸಾಂಸ್ಕೃತಿಕ ಪ್ರಜ್ಞೆ, ಸ್ತ್ರೀ ಅಸ್ತಿತ್ವ, ವಾಸ್ತವಿಕ ಬದುಕಿನ ಅನಾವರಣ ಮನುಷ್ಯ ಸಂಬಂಧಗಳು ಇವುಗಳನ್ನು ವಿವರಿಸುವಲ್ಲಿ ನಾಗವೇಣಿಯವರ ಕೊಡುಗೆ ಅಪಾರವಾದುದು. ಈ ದೃಷ್ಟಿಯಿಂದ ಎಚ್.ನಾಗವೇಣಿಯವರ ಸಾಂಸ್ಕೃತಿಕ ಪ್ರಜ್ಞೆ ಮೌಲಿಕವಾದುದಾಗಿದೆ.

## ಪರಾಮರ್ಶನ ಗ್ರಂಥ


೧. ಅರ್ಥಲೋಕ — ಡಾ. ಜಿ.ಎಸ್. ಅಮೂರ
ಸ್ನೇಹ ಪ್ರಕಾಶನ
೧೩೮, ೭ನೇ 'ಸಿ' ಮುಖ್ಯ ರಸ್ತೆ
ವಿಜಯನಗರ ೨ನೇ ಹಂತ
ಬೆಂಗಳೂರು-೪೦

೨. ಕನ್ನಡ ಕಥನ ಸಾಹಿತ್ಯ ಕಾದಂಬರಿ — ಜಿ.ಎಸ್. ಅಮೂರ,
ಶ್ರೀಹರಿ ಪ್ರಕಾಶನ
ಧಾರವಾಡ – ೧೯೯೪
ಭಾರತೀ ನವೋದಯ ನಗರ

೩. ಕನ್ನಡ ಕಾದಂಬರಿ ನಡೆದುಬಂದ ರೀತಿ — ಡಾ. ಶಾಂತಿನಾಥ ದೇಸಾಯಿ
ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

೪. ಕೂಡು ಕಟ್ಟು — ಪುರುಷೋತ್ತಮ ಬಿಳಿಮಲೆ, ೧೮೮೭
ಆನಂದ ಕಂದ ಪ್ರಕಾಶನ,
ಮಲ್ಲಾಡಿಹಳ್ಳಿ.

೫. ಕರಾವಳಿ ಜಾನಪದ — ಪುರುಷೋತ್ತಮ ಬಿಳಿಮಲೆ, ೧೯೯೦
ಮಂಗಳ ಗಂಗೋತ್ರಿ
ಕರ್ನಾಟಕ ಜಾನಪದ ಮತ್ತು ಯಕ್ಷಗಾನ
ಅಕಾಡೆಮಿ, ಬೆಂಗಳೂರು

೬. ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು — ಡಾ. ಗಾಯಿತ್ರೀ ನಾವಡ, ೧೯೯೯
ರಾಷ್ಟ್ರಕವಿ ಗೋವಿಂದ ಪೈ.
ಸಂಶೋಧನಾ ಕೇಂದ್ರ, ಉಡುಪಿ,
ಸಿರಿ ಪ್ರಕಾಶನ, ಹೊಸಪೇಟೆ

೭ ಕರಾವಳಿ ಜಾನಪದ — ಸಂಪಾದಕರು: ಪ್ರೊ.ಎ.ವಿ. ನಾವಡ
ಪ್ರಕಾಶನ
ಸ್ವಾಗತ ಸಮಿತಿ
ಅಖಿಲ ಭಾರತ ೭೪ನೆಯ ಕನ್ನಡ ಸಾಹಿತ್ಯ
ಸಮ್ಮೇಳನ – ೨೦೦೭
ಉಡುಪಿ.

೮. ಕುವೆಂಪು ಕಾದಂಬರಿಗಳ ಸಾಂಸ್ಕೃತಿಕ ಅಧ್ಯಯನ — ಡಾ. ಗುರುಪಾದ ಮರಿಗುದ್ದಿ, ಸಹ್ಯಾದ್ರಿ ಪ್ರಕಾಶನ, ಜಯಲಕ್ಷ್ಮೀಪುರ, ಮೈಸೂರು – ೫೭೦೦೧೨

೯. ಗ್ರಾಮೀಣ — ಚಿದಾನಂದ ಮೂರ್ತಿ ಎಂ. ೧೯೭೭, ಪ್ರ: ಬಾಪೊ ಪ್ರಕಾಶನ, ೮೮ ಮೈಸೂರು ರಸ್ತೆ, ಬೆಂಗಳೂರು

೧೦. ಜಾನಪದ ಸಾಹಿತ್ಯ — ಕಾಳೇಗೌಡ ನಾಗವಾರ, ೧೯೯೯ ಪ್ರ, ಯುಗಾದಿ ಪ್ರಕಾಶನ ಬೆಂಗಳೂರು

೧೧. ತುಳು ಜನಪದ — ವಿವೇಕ ರೈ. ಬಿ.ವಿ. ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೮೫.

೧೨. ತುಳು ಅಧ್ಯಯನ ಕೆಲವು ವಿಚಾರಗಳು — ವಿವೇಕ ರೈ, ಬಿ.ವಿ. ೧೯೮೦ ತುಳುವ ಪ್ರಕಾಶನ, ಮಂಗಳೂರು.

೧೩. ತುಳು ಬದುಕು — ಅಮೃತ ಸೋಮೇಶ್ವರ, ೧೯೮೪ ಪ್ರಕೃತಿ ಪ್ರಕಾಶನ, ಕೋಟೆಕಾರು

೧೪. ತುಳುವರ ಆಚರಣೆಗಳಲ್ಲಿ ಕಲಾವಂತಿಕೆ — ರಾಜಗೋಪಾಲ. ಕ.ವೆಂ ೧೯೮೯, ಪ್ರ: ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು

೧೫. ತುಳು ಪಾಡ್ದನ ಕತೆಗಳು — ಅಮೃತ ಸೋಮೇಶ್ವರ, ೧೯೯೮, ಪ್ರ: ಸಾಹಿತ್ಯಾಂಜಲಿ ಗ್ರಂಥಮಾಲೆ ಕೋಟೆಕಾರು

೧೬. ದಕ್ಷಿಣ ಕರ್ನಾಟಕದ ಜಾನಪದ ರಂಗಭೂಮಿ — ರಾಜೇಂದ್ರ, ಡಿ.ಕೆ. ೧೯೯೦

೧೭. ನಿರುಕ್ತ — ಡಾ. ಎಲ್.ಸಿ. ಸುಮಿತ್ರಾ
ವಿಮರ್ಶಾ ಲೇಖನಗಳು,
ಸಿ.ವಿ.ಜಿ. ಪಬ್ಲಿಕೇಷನ್ಸ್,
ಬೆಂಗಳೂರು

೧೮. ಮುಗೇರರು ಜನಾಂಗ ಜಾನಪದ ಅಧ್ಯಯನ — ಅಭಯ ಕುಮಾರ್. ಕೆ. ೧೯೯೪
ಕನ್ನಡ ಮತ್ತು ಸಂಸ್ಕೃತಿ
ನಿರ್ದೇಶನಾಲಯ,
ಬೆಂಗಳೂರು ಮತ್ತು ಕರ್ನಾಟಕ
ತುಳು ಸಾಹಿತ್ಯ ಅಕಾಡೆಮಿ,
ಮಂಗಳೂರು

೧೯. ಮಧುರವೇ ಕಾರಣ — ಡಾ. ಮಹೇಶ್ವರಿ. ಯು
ಕರ್ನಾಟಕ ಸಂಘ
ಪುತ್ತೂರು ಮಾಧ್ಯಮ ಪ್ರಕಾಶನ

೨೦. ಯುಗಧರ್ಮ ಮತ್ತು ಸಾಹಿತ್ಯ ದರ್ಶನ — ಕೀರ್ತಿನಾಥ ಕುರ್ತುಕೋಟಿ
ಲೋಟಸ್ ಪ್ರಿಂಟರ್ಸ್
೪ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು-೧೦.

೨೧. ವಿಮರ್ಶೆಯ ವಿನಯ — ಕುರ್ತುಕೋಟಿ ಕೀರ್ತಿನಾಥ ಪ್ರಕಾಶನ,
ಮನೋಹರ ಗ್ರಂಥಮಾಲೆ,
ಧಾರವಾಡ – ೧, ೧೯೮೨.

೨೨. ವೈದೇಹಿಯವರ ಸಾಹಿತ್ಯ ಒಂದು ಅಧ್ಯಯನ — ಡಾ. ಸುರೇಖ, ಕೆ.
ಪಾಂಚಜನ್ಯ ಪಬ್ಲಿಕೇಷನ್ಸ್
ನಂ.೪೨೦/೨೮, ೬-೭ ಕ್ರಾಸ್ ನಡುವೆ
ಅಮರಜ್ಯೋತಿನಗರ,
ಬೆಂಗಳೂರು-೫೬೦೦೪೦

೨೩. ಸಮಕಾಲೀನ ಕಥೆ ಕಾದಂಬರಿ ಹೊಸ ಪ್ರಯೋಗಗಳು — ಡಾ. ಜಿ.ಎಸ್. ಅಮೂರ
ಕನ್ನಡ ಸಾಹಿತ್ಯ ಪರಿಷತ್ತು
೧೯೮೧ – ಮುದ್ರಣ

೨೪. ಸ್ತ್ರೀ ಲೇಖ — ಡಾ. ಕೆ.ಎಸ್. ರತ್ನಮ್ಮ,
ಶ್ರೀ ಕ್ಷೇತ್ರ ಪ್ರಕಾಶನ
೨೮೭/ಎಸ್. ೨೧
ರಾಮಾನುಜ ಮೊಹಲ್ಲಾ
ಮೈಸೂರು – ೪.

| | | |
|---|---|---|
| ೨೫. | ಹೊಸಗನ್ನಡ ಸಾಹಿತ್ಯ | ಎಲ್.ಎಸ್. ಶೇಷಗಿರಿ ರಾವ್<br>ಕ.ಸಾ. ಪರಿಷತ್ತು<br>ಬೆಂಗಳೂರು– ೧೮ |
| ೨೬ | ಹೊಸಗನ್ನಡ ಸಾಹಿತ್ಯ ಚರಿತ್ರೆ | ಪ್ರೊ. ಎಲ್.ಎಸ್. ಶೇಷಗಿರಿ ರಾವ್<br>ಅಂಕಿತ ಪುಸ್ತಕ<br>ಬಸವನಗುಡಿ,<br>ಬೆಂಗಳೂರು – ೪. |

